# ಕನ್ನಡ ವಿಶ್ವವಿದ್ಯಾಲಯ ಹಂಪಿ



ಎಂ.ಫಿಲ್ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ

ವಿಷಯ:

# ಆಯ್ದ ವಚನ ಕಾರ್ತಿಯರ ವಚನಗಳಲ್ಲಿ ಭಕ್ತಿ ಮತ್ತು ಕಾಯಕ ನಿಷ್ಠೆ


ಸಂಶೋಧನಾ ವಿದ್ಯಾರ್ಥಿ

ರೇವಣ್ಣಗೌಡ. ಕೆ. ಎಸ್.

ನೊಂದಣಿ ಸಂಖ್ಯೆ: ಕೆಎಸ್‌ಪಿಬಿಕೆಎಸ್೦೦೬೫೨

ಮಾರ್ಗದರ್ಶಕರು

ಡಾ. ವೆಂಕಟಪ್ಪ

ಸಹಾಯಕ ಪ್ರಾಧ್ಯಾಪಕರು

ಎಸ್. ಎಲ್. ಎನ್. ಕಾಲೇಜು

ಕೋಟೆ. ಬೆಂಗಳೂರು - ೫೬೦೦೦೨



ಮಾನ್ಯತಾ ಸಂಸ್ಥೆ

ಕನ್ನಡ ಸಾಹಿತ್ಯ ಪರಿಷತ್

ಕನ್ನಡ ಸಂಶೋಧನಾ ಕೇಂದ್ರ

ಪಂಪ ಮಹಾಕವಿ ರಸ್ತೆ.

ಚಾಮರಾಜ ಪೇಟೆ, ಬೆಂಗಳೂರು - ೫೬೦೦೧೮.

೨೦೧೨-೧೩

ಕನ್ನಡ ವಿಶ್ವವಿದ್ಯಾಲಯ ಹಂಪಿ



ಎಂ.ಫಿಲ್ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ

ವಿಷಯ:

# ಆಯ್ದ ವಚನ ಕಾರ್ತಿಯರ ವಚನಗಳಲ್ಲಿ ಭಕ್ತಿ ಮತ್ತು ಕಾಯಕ ನಿಷ್ಠೆ


ಸಂಶೋಧನಾ ವಿದ್ಯಾರ್ಥಿ

ರೇವಣ್ಣಗೌಡ. ಕೆ. ಎಸ್.

ನೊಂದಣಿ ಸಂಖ್ಯೆ: ಕೆಎಸ್‌ಪಿಬಿಕೆಎಸ್೦೦೬೫೨

ಮಾರ್ಗದರ್ಶಕರು

ಡಾ. ವೆಂಕಟಪ್ಪ

ಸಹಾಯಕ ಪ್ರಾಧ್ಯಾಪಕರು

ಎಸ್. ಎಲ್. ಎನ್. ಕಾಲೇಜು

ಕೋಟೆ. ಬೆಂಗಳೂರು – ೫೬೦೦೦೨



ಮಾನ್ಯತಾ ಸಂಸ್ಥೆ

ಕನ್ನಡ ಸಾಹಿತ್ಯ ಪರಿಷತ್

ಕನ್ನಡ ಸಂಶೋಧನಾ ಕೇಂದ್ರ

ಪಂಪ ಮಹಾಕವಿ ರಸ್ತೆ.

ಚಾಮರಾಜ ಪೇಟೆ, ಬೆಂಗಳೂರು – ೫೬೦೦೧೮.

೨೦೧೨-೧೩

# ದೃಢೀಕರಣ ಪತ್ರ

ರೇವಣ್ಣಗೌಡ. ಕೆ.ಎಸ್. ರವರು ಎಂ.ಫಿಲ್ ಪದವಿಗಾಗಿ ಬರೆದು ಸಿದ್ಧಪಡಿಸಿರುವ 'ಆಯ್ದ ವಚನಕಾರ್ತಿಯರ ವಚನಗಳಲ್ಲಿ ಭಕ್ತಿ ಮತ್ತು ಕಾಯಕ ನಿಷ್ಠೆ' ಎಂಬ ನಿಬಂಧವನ್ನು ಹಂಪಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ ಸಲ್ಲಿಸಲು ನನ್ನ ಮಾರ್ಗದರ್ಶನದಲ್ಲಿ ಸ್ವತಂತ್ರ ಅಧ್ಯಯನದ ಮೂಲಕ ಸಿದ್ಧಪಡಿಸಿರುತ್ತಾರೆ. ಈ ನಿಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಇದಕ್ಕೆ ಮೊದಲು ಬೇರೆ ಯಾವುದೇ ಪದವಿಗಾಗಲಿ ಅಥವಾ ಇನ್ನಿತರ ಉದ್ದೇಶಗಳಿಗಾಗಲಿ ಸಲ್ಲಿಸಿಲ್ಲವೆಂದು ಈ ಮೂಲಕ ದೃಢೀಕರಿಸಿರುತ್ತೇನೆ.

ದಿನಾಂಕ: 13/06/2014.

ಸ್ಥಳ: ಬೆಂಗಳೂರು

ಸಹಿ

13/6/14

ಡಾ|| ವೆಂಕಟಪ್ಪ
ಕನ್ನಡ ಉಪನ್ಯಾಸಕರು
ಎಸ್.ಎಲ್.ಎನ್. ಕಾಲೇಜು
ಕೋಟೆ, ಬೆಂಗಳೂರು-2.

ಮಾರ್ಗದರ್ಶಕರು
ಡಾ. ವೆಂಕಟಪ್ಪ
ಸಹಾಯಕ ಪ್ರಾಧ್ಯಾಪಕರು
ಎಸ್. ಎಲ್. ಎನ್. ಕಾಲೇಜು
ಕೋಟೆ.
ಬೆಂಗಳೂರು - ೫೬೦೦೦೨

## ಪ್ರಮಾಣ ಪತ್ರ

ಹಂಪಿ ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್ ಪದವಿಗಾಗಿ ಸಲ್ಲಿಸುತ್ತಿರುವ 'ಆಯ್ದ ವಚನಕಾರ್ತಿಯರ ವಚನಗಳಲ್ಲಿ ಭಕ್ತಿ ಮತ್ತು ಕಾಯಕ ನಿಷ್ಠೆ' ಎಂಬ ಶೀರ್ಷಿಕೆಯ ಈ ಎಂ.ಫಿಲ್ ನಿಬಂಧವನ್ನು ಡಾ. ವೆಂಕಟಪ್ಪ, ಸಹಾಯಕ ಪ್ರಾಧ್ಯಾಪಕರು ಎಸ್.ಎಲ್.ಎನ್. ಕಾಲೇಜು, ಕೋಟೆ, ಬೆಂಗಳೂರು, ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ನಿಬಂಧವನ್ನು ಈ ಮೊದಲು ಯಾವುದೇ ವಿಶ್ವವಿದ್ಯಾಲಯದ ಪದವಿ ಅಥವಾ ಇತರೆ ಉದ್ದೇಶಗಳಿಗಾಗಲಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ರೇವಣ್ಣಗೌಡ. ಕೆ. ಎಸ್.

ದಿನಾಂಕ: 13/06/2014. ರೇವಣ್ಣಗೌಡ ಕೆ. ಎಸ್.

ಸ್ಥಳ: ಬೆಂಗಳೂರು ಸಂಶೋಧನಾ ವಿಧ್ಯಾರ್ಥಿ.

# ಪರಿವಿಡಿ

**ಆಯ್ದ ವಚನ ಕಾರ್ತಿಯರ ವಚನಗಳಲ್ಲಿ ಭಕ್ತಿ**
**ಮತ್ತು ಕಾಯಕ ನಿಷ್ಠೆ**

# ಅಧ್ಯಾಯ ೧
# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

## ೧.೧. ಪೀಠಿಕೆ.

ಶಿವಶರಣ ವಚನಕಾರರ ಹನ್ನೆರಡನೆಯ ಶತಮಾನ ಕನ್ನಡ ನಾಡು, ನುಡಿ, ಸಂಸ್ಕೃತಿಯ ಮೇಲೆ ತನ್ನದೇ ಆದ ಛಾಪನ್ನು ಒತ್ತಿದ ಕಾಲ. ಬಸವಾದಿ ಶಿವಶರಣ–ಶರಣೆಯರಿಂದಾಗಿ ಈ ಕಾಲಕ್ಕೆ ಪಾವಿತ್ರ್ಯತೆ ಬಂದಿದೆ. "ವಿಶ್ವ ಕುಟುಂಬ" ಕನಸು ಕಂಡ ಬಸವಣ್ಣನವರು, ಅದನ್ನು ನನಸು ಮಾಡಲು ಪ್ರಯತ್ನಪಟ್ಟವರು. ಬಸವಣ್ಣನವರಿಗೆ ಹೆಗಲು ಕೊಟ್ಟು ದುಡಿದ ಅನೇಕ ಶಿವಶರಣ, ಶಿವಶರಣೆಯರು ತಮ್ಮ ಕಾಯಕ, ದಾಸೋಹದ ಮೂಲಕ ಗಮನ ಸೆಳೆದಿದ್ದಾರೆ. ಅವರುಗಳನ್ನು ನೆನಪಿಸಿಕೊಳ್ಳುವುದೇ ಸುಯೋಗ. ಈ ನೆಲದ ಪಾವಿತ್ರ್ಯತೆಯನ್ನು ಹೆಚ್ಚಿಸಿದ ಶಿವಶರಣೆಯರು ಲೋಕಮಾನ್ಯರಾಗಿದ್ದಾರೆ.

ಬಡತನವಿದ್ದರೂ ಅದನ್ನು ತೋರಿಸಿಕೊಳ್ಳಲಿಲ್ಲ. ಸಿರಿತನವಿದ್ದರೂ ಅದನ್ನು ಇಟ್ಟುಕೊಳ್ಳಲಿಲ್ಲ. ಬಡವರ ಸೇವೆಯೇ ಭಗವಂತನ ಸೇವೆಯೆಂದು ದುಡಿದಿದ್ದಾರೆ. ಶಿವಶರಣ, ಶರಣೆಯರು ಶ್ರಮದ ಬೆಲೆಯನ್ನು ಜಗತ್ತಿಗೆ ತೋರಿಸುವ ಮೂಲಕ ಮೌಲ್ಯಗಳ ಸಾಕಾರಮೂರ್ತಿಗಳಾಗಿದ್ದಾರೆ. ಮೌಲ್ಯಗಳು ಇರುವುದು ಹೇಳುವುದಕ್ಕಲ್ಲ; ಅದನ್ನು ಅನುಸರಿಸಿ ತೋರಿಸುವುದಕ್ಕೆ ಎಂಬುದನ್ನು ಸಾಧಿಸಿ ತೋರಿಸಿದ್ದಾರೆ.

ಶ್ರೀಮಂತರ ಮನೆಯಲ್ಲಿ ಕಾಲು ನೀಡಿ ಕುಳಿತಿದ್ದ ಸಾಹಿತ್ಯದೇವಿ ಬಡವರ ಗುಡಿಸಿಲಿನವರೆಗೆ ಬರುವಂತೆ ಮಾಡಿದ ಕೀರ್ತಿ ಶಿವಶರಣ, ಶರಣೆಯರಿಗೆ ಸಲ್ಲಬೇಕು. ಕನ್ನಡ ಸಾಹಿತ್ಯ ಪ್ರಕಾರಕ್ಕೆ "ವಚನ"ಗಳೆಂಬ ಹೊಸ ಪ್ರಕಾರವನ್ನು ನೀಡಿದ ಇವರು ಕನ್ನಡ ಸಾಹಿತ್ಯ ಪರಂಪರೆಗಳಿಗೆ ಮರುಜೀವ ಕೊಟ್ಟಿದ್ದಾರೆ.

ಅನುಭವ ಮಂಟಪದ ಮೂಲಕ ಶಿವಶರಣರು ತಮ್ಮ ಅನುಭಾವದ ನಿಲುವನ್ನು ವಿಶ್ವಕ್ಕೆ ಪರಿಚಯಿಸಿದ್ದು ಒಂದು ದೊಡ್ಡ ಇತಿಹಾಸ. ಆ ಅನುಭಾವದ ನೆರಳಿನಲ್ಲಿ ಬದುಕುವುದೇ ಒಂದು ಸುಯೋಗ. ಆಗ ಮಾತ್ರ ಬಸವಾದಿ ಶಿವಶರಣರ 'ವಿಶ್ವಕುಟುಂಬ' ಕನಸನ್ನು ಸಾಕಾರಗೊಳಿಸಲು ಸಾಧ್ಯವಾಗುತ್ತದೆ.

ನಾಡು–ನುಡಿ–ಸಂಸ್ಕೃತಿಗೆ ಬೆಳಕಿನ ಬೀಜವನ್ನು ಬಿತ್ತಿದ ಶಿವಶರಣ, ಶರಣೆಯರ ಬಗ್ಗೆ ಪ್ರತಿಯೊಬ್ಬರೂ ತಿಳಿದು ಕೊಳ್ಳುವುದು ಅವಶ್ಯಕವಾಗಿದೆ. ಶರಣ ಸಂಸ್ಕೃತಿಯ

ಹುಟ್ಟಿಗೆ ಕಾರಣರಾದ ಇವರೆಲ್ಲರೂ ಲೋಕಪೂಜ್ಯರಾಗಿದ್ದಾರೆ. ನಮ್ಮ ದೇಶದ ಈಗಿನ ಪರಿಸ್ಥಿತಿಯನ್ನು ಗಮನಿಸಿದರೆ ಅಯ್ಯೋ ಎನಿಸುತ್ತದೆ. ಮಾತು ಕೃತಿಗಳಲ್ಲಿ ಅಂತರವನ್ನು ಕಾಣುತ್ತಿದ್ದೇವೆ. ಹಿರಿಯರೊಂದಿಗೆ ಹೇಗೆ ವರ್ತಿಸಬೇಕೆಂದು ತಿಳಿಯದ ಮೂಢರಿದ್ದಾರೆ. ಅಧಿಕಾರವೆಂಬುದು ಹಣ ಮಾಡಲಿಕ್ಕೆ ಎಂಬ ಭಾವನೆ ಹೊತ್ತ ಮನುಜರೇ ಜಾಸ್ತಿಯಾಗಿದ್ದಾರೆ. ಶ್ರಮದ ಬೆಲೆ ಏನೆಂದು ತಿಳಿಯದೆ ಬೇಕಾಬಿಟ್ಟಿಯಾಗಿ ಜೀವಿಸುವವರಿದ್ದಾರೆ. ಸ್ವಜನ ಪಕ್ಷಪಾತ, ಅನಾಚಾರ, ಅತ್ಯಾಚಾರ, ಭ್ರಷ್ಟಾಚಾರ ತಾಂಡವವಾಡುತ್ತಿದೆ. ಇದಕ್ಕೆಲ್ಲಾ ಕಾರಣ ಮಾನವೀಯ ಮೌಲ್ಯಗಳ ಕುಸಿತವೆಂದರೂ ತಪ್ಪಾಗಲಾರದು.

ಬಸವಾದಿ ಶಿವಶರಣರು ಹಾಕಿಕೊಟ್ಟ ಮಾರ್ಗದಲ್ಲಿ ನಡೆದಿದ್ದರೆ ಈ ರೀತಿ ಆಗುತ್ತಿರಲಿಲ್ಲ. ಪಂಚಾಚಾರದ ಆಚರಣೆಯನ್ನು ಕ್ರಮಬದ್ಧವಾಗಿ ಅನುಸರಿಸಿದಲ್ಲಿ ಈ ರೀತಿಯ ಸನ್ನಿವೇಶ ಸೃಷ್ಟಿಯಾಗುತ್ತಿರಲಿಲ್ಲ. ಶರಣ ಸಂಸ್ಕೃತಿ ನಾಶವಾಗುತ್ತಿರುವುದೇ ದೇಶದ ಈಗಿನ ಸ್ಥಿತಿಗೆ ಕಾರಣವೆಂದರೂ ತಪ್ಪಾಗಲಾರದು.

ಬಸವತತ್ವವನ್ನು ಅನುಸರಿಸಿ ಜೀವನ ಸಾಗಿಸುವುದರಿಂದ ಇಹಪರಗಳಲ್ಲೂ ಸುಖವನ್ನು ಕಾಣಬಹುದು. ಇದು ದಿಟ. ಇದಕ್ಕೆ ಬಸವಣ್ಣನನ್ನು ಅನುಸರಿಸಿ, ಬದುಕು ಸಾಗಿಸಿದ ಶರಣ, ಶರಣೆಯರ ಉದಾಹರಣೆ ನಮ್ಮ ಕಣ್ಣ ಮುಂದಿದೆ.

ಜಾತಿ ಭೇದವನ್ನು ತೊಡೆದು ಹಾಕಿ, ಸಮಾನತೆ ತತ್ವ ಸಾರಿದ ಶಿವಶರಣರು ಕಾಯಕಕ್ಕೆ ಹೊಸಭಾಷ್ಯ ಬರೆದರು. ಈ ಕೆಲಸವನ್ನು ಬರೀ ಪುರುಷರೇ ಮಾಡಲಿಲ್ಲ. ಅವರ ಜೊತೆಗೆ ಮಹಿಳೆಯರೂ ಸೇರಿದ್ದಾರೆ. ಶಿವಶರಣರಷ್ಟೇ ಮಹತ್ವವಾದ ಕಾರ್ಯವನ್ನು ಶಿವಶರಣೆ ಮಹಿಳೆಯರು ಮಾಡಿದ್ದಾರೆ. ಎಷ್ಟೋ ಸಂದರ್ಭದಲ್ಲಿ ಶರಣರಿಗೆ ಶರಣೆಯರೇ ಮಾದರಿಯಾಗಿದ್ದಾರೆ. ಶರಣೆಯರ ಆದರ್ಶದ ಬೆಳಕಿನಲ್ಲಿ ತಮ್ಮ ಜ್ಞಾನದ ಕೊರತೆಯನ್ನು ನೀಗಿಸಿಕೊಂಡು ಸಾಧನೆಯತ್ತ ಹೆಜ್ಜೆ ಹಾಕಿದ ಶರಣರನ್ನೂ ಕೂಡ ನಾವು ಕಾಣಬಹುದು.

ಕಲ್ಯಾಣದಲ್ಲಿ ಅನುಭವ ಮಂಟಪದ ಸಂದರ್ಭದಲ್ಲಿ ಮೂವತ್ತುಮೂರಕ್ಕೂ ಹೆಚ್ಚು ಜನ ಶಿವಶರಣೆಯರು ತಮ್ಮ ಅನುಭವ, ಅನಿಭಾವಗಳ ಮೂಲಕ ಬಸವಾದಿ ಶಿವಶರಣರ ಕನಸನ್ನು ನನಸು ಮಾಡಲು ಹೊರಟಿರುವುದನ್ನು ಕಾಣಬಹುದು. ಪುರುಷರಷ್ಟೇ ಸಾಧನೆಯನ್ನು ಇವರು ಮಾಡಿದ್ದಾರೆ.

ಲೋಕಮಾನ್ಯರಾದ ಶಿವಶರಣೆಯರ ಬಗ್ಗೆ ಪ್ರತಿಯೊಬ್ಬರೂ ತಿಳಿದುಕೊಳ್ಳುವುದು ಅವಶ್ಯಕವಾಗಿದೆ. ಈ ಹಿನ್ನೆಲೆಯಲ್ಲಿ ಇಲ್ಲಿ ಐವರು ಶರಣೆಯರ ಪರಿಚಯ ಮಾಡಲಾಗಿದೆ. ಶರಣರಲ್ಲಿ ಇವರು ಮುಂದುವರಿದವರು, ಇವರು ಹಿಂದುಳಿದವರು, ಇವರು ಆ ಜಾತಿ, ಈ ಜಾತಿ ಎಂಬ ತಾರತಮ್ಯವಿಲ್ಲ. ಇಲ್ಲಿ ಜಾತಿಭೇದವಿಲ್ಲ. ಎಲ್ಲಾ ಒಂದೇ. ಬ್ರಾಹ್ಮಣ ಶರಣ, ದಲಿತ ಶರಣ ಎಂಬ ವಿಭಾಗವಿಲ್ಲ. ಶರಣ ಸಂಸ್ಕೃತಿಯ ಸಾಕಾರಮೂರ್ತಿಗಳಾದ ಎಲ್ಲರೂ ಒಂದೇ ಜಾತಿ, ಒಂದೇ ಕುಲ. ಈ ಶಿವಶರಣೆಯರು ಅಸಾಧ್ಯ ಸಾಧನೆಯ ಮೂಲಕ ಗಮನ ಸೆಳೆದಿದ್ದಾರೆ.

ಶರಣ ಸಂಸ್ಕೃತಿಯನ್ನು ಪ್ರಸಾರ ಮಾಡಿದವರಲ್ಲಿ ಈ ಶಿವಶರಣೆಯರು ಕೂಡ ಮಹತ್ವದ ಪಾತ್ರವಹಿಸಿದ್ದಾರೆ. ಅಂತಹ ವಚನಕಾರ್ತಿಯಲ್ಲಿ ಕೆಲವು ಆಯ್ದ ಶಿವಶರಣೆಯರ ವಚನಗಳಲ್ಲಿ ಭಕ್ತಿ ಮತ್ತು ಕಾಯಕನಿಷ್ಠೆಯನ್ನು ಅರಿಯುವ ಪ್ರಯತ್ನವನ್ನು ನನ್ನ ಈ ಅಧ್ಯಯನದಲ್ಲಿ ಮಾಡಲಾಗಿದೆ.

## ೧ : ೨. ಅಧ್ಯಯನದ ಉದ್ದೇಶ

ವಚನಕಾರ್ತಿಯರಲ್ಲಿ ವಿವಿಧ ಸ್ತರಗಳಿಂದ ಬಂದ ಸ್ತ್ರೀಯರು ಸಮಾವೇಶಗೊಂಡಿದ್ದಾರೆ. ಆದರೆ ಅವರು ತಮ್ಮ ಪೂರ್ವಾಶ್ರಮದ ಜಾತಿ ಭೇದ, ಅಂತರ – ಅಂತಸ್ತುಗಳನ್ನು ಮರೆತು, ಶರಣರು ನಿರ್ಮಿಸಿದ ಭೇದರಹಿತ ಸರ್ವಸಮಾನ ಮಾನವಧರ್ಮದ ವೇದಿಕೆಯ ಮೇಲೆ ಒಂದಾಗಿ ಬೆರೆತು, ಕೌಟುಂಬಿಕ, ಧಾರ್ಮಿಕ, ಸಾಮಾಜಿಕ, ಆರ್ಥಿಕ, ಆಧ್ಯಾತ್ಮಿಕ, ಆನುಭಾವಿಕ ಎಲ್ಲ ಹಂತಗಳಲ್ಲಿ ತಮ್ಮ ಚಿಂತನೆಗಳನ್ನು ಪರಸ್ಪರ ಹಂಚಿಕೊಂಡು ಬದುಕಿದ್ದಾರೆ.

ವರ್ಗ, ವರ್ಣಭೇದದಂತೆ ಲಿಂಗಭೇದವನ್ನೂ ಒಪ್ಪದ ಅವರು, ಶರಣರ ಸ್ತ್ರೀ ಪುರುಷ ಸಮಾನತೆಯ ಘೋಷಣೆಯಲ್ಲಿ ತಮ್ಮ ಧ್ವನಿಯನ್ನು ಕೂಡಿಸಿ, ಅದನ್ನು ಅರ್ಥಪೂರ್ಣವಾಗಿ ಆಚರಣೆಯಲ್ಲಿ ತಂದು ಜೀವನ ಸಾರ್ಥಕ ಪಡಿಸಿಕೊಂಡಿದ್ದಾರೆ.

ಬಹುಸಂಖ್ಯೆಯ ಶರಣೆಯರು ಸಂಸಾರಿಗಳು. ಸತಿ ಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ ಎಂಬ ದಾಂಪತ್ಯ ಧರ್ಮವನ್ನು ಒಪ್ಪಿಕೊಂಡು – ಅಪ್ಪಿಕೊಂಡು ನಡೆದವರು. ಆಧ್ಯಾತ್ಮ ಸಾಧನೆಯ ಮಾರ್ಗದಲ್ಲಿ ಸಂಸಾರ ಹಗೆಯಲ್ಲ. ಪ್ರತಿಯಾಗಿ ಅದು ಅದಕ್ಕೆ ಪ್ರೇರಕ, ಪೂರಕ ಎಂಬ ಸತ್ಯವನ್ನು ಬದುಕಿ ತೋರಿಸಿದವರು. ಬದುಕಿನ ಬಗೆಗೆ ಅಪಾರ ಪ್ರೀತಿಯನ್ನು ಇಟ್ಟುಕೊಂಡ ಅವರು ಪ್ರಪಂಚ ಸುಖದಲ್ಲಿಯೇ ಪಾರಮಾರ್ಥದ ದರ್ಶನವನ್ನು ಮಾಡಿಕೊಂಡವರು. ಅವರದು ಒಬ್ಬರ ಮನವನ್ನೊಬ್ಬರು ಅರಿತು ಬೆರೆತು ಸಾಗಿದ ನೆಮ್ಮದಿಯ ದಾಂಪತ್ಯ.

"ಪತಿಯಾಜ್ಞೆಯ ಆಚರಿಸುವ ಸತಿಗ್ಯಾಕೆ ಪ್ರತಿಜ್ಞೆಯು, ನಮ್ಮ ನಿಷ್ಠೆ ಪತಿಯಾಜ್ಞೆಯಲ್ಲಿ" (ಗಂಗಾಬಿಕೆ) ಎಂದು ಪತಿಯಾಜ್ಞೆಯಂತೆ ಅವನ ಆಚಾರ ವಿಚಾರಗಳನ್ನು ಅನುಸರಿಸಿ ನಡೆದರೂ "ಕೂಟಕ್ಕೆ ಸತಿ ಪತಿ ಎಂಬ ನಾಮವಲ್ಲದೆ ಅರಿವಿಂಗೆ ಬೇರೊಂದೊಡಲುಂಟೆ"? (ಆಯ್ದಕ್ಕಿ ಲಕ್ಕಮ್ಮ) ಎಂದು ತನ್ನ ಅರಿವೆಂಬ ಗುರುವಿನ ಮಾರ್ಗದರ್ಶನದಿಂದ ನಡೆದು ಕೆಲವು ಸಲ ಪತಿ ಮಾರ್ಗ ತಪ್ಪಿದಾಗ ಎಚ್ಚರಿಸಿ, ನಿಜದ ನಿಲವ ತೋರಿಸಿ ಸತಿ ಧರ್ಮಕ್ಕೂ ಚ್ಯುತಿ ಬರದಂತೆ ಜೀವನ ನಿರ್ವಹಿಸಿದರು. "ಬಸವನ ಅನುಭವದಿಂದ ವಿವರವ ಕಂಡು ವಿಚಾರಪತ್ನಿಯಾದೆನಯ್ಯ"(ನೀಲಮ್ಮ) ಎಂದು ಪತಿಗೆ ವೈಚಾರಿಕ ಸಂಗಾತಿಯಾಗಿ ಅವನ ಬದುಕಿನ ಉಜ್ವಲತೆಯಲ್ಲಿ ಪಾಲುಗೊಂಡವರು.

ಈವರೆಗಿನ ಸಾಹಿತ್ಯ ಚರಿತ್ರೆಗಳು ಮಹಿಳಾ ಸಾಹಿತಿಗಳನ್ನು, ಅವರ ಕೃತಿಗಳನ್ನು

ವಸ್ತುನಿಷ್ಠವಾಗಿ ಚಿಂತಿಸಿದೆಯೇ ಎಂಬುದು ಮಹಿಳಾ ಅಧ್ಯಯನಕಾರರನ್ನು ಕಾಡಿಸುವಂತಿದೆ. ಏಕೆಂದರೆ ದೀರ್ಘ ಪರಿಶ್ರಮ ಹಾಗೂ ಉನ್ನತ ಪಾಂಡಿತ್ಯಗಳ ಪ್ರತಿಫಲವಾಗಿ ಸೃಷ್ಟಿಗೊಂಡ ಈ ಸಾಹಿತ್ಯ ಚರಿತ್ರೆಗಳಲ್ಲಿ ಮಹಿಳಾ ಸಾಹಿತಿಗಳ ಮತ್ತು ಅವರ ಕೃತಿಗಳ ಪ್ರಸ್ತಾಪ ಬಂದಿರುವುದು ತೀರಾ ನಗಣ್ಯ ಪ್ರಮಾಣದಲ್ಲಿ. ಮಹಿಳೆಯರು ಸಾಹಿತ್ಯ ಕೃಷಿಯಲ್ಲಿ ತೊಡಗಿದ್ದೇ ಇಲ್ಲವೇನೂ ಎಂಬಂತೆ, ಮಹಿಳೆಗೆ ದತ್ತವಾಗುವ ತಾರತಮ್ಯದ ಸಾಮಾಜಿಕ ಸಂದರ್ಭದಲ್ಲಿ ಅವಳ ಸೃಜನ ಶೀಲತೆಯೇ ಪ್ರಶ್ನಾರ್ಹವಾಗಿ ಬಿಡುವುದು ಸಾಧ್ಯ. ಜನಪದ ಮತ್ತಿತರ ಸಾಹಿತ್ಯದ ಮೂಲಚೇತನ ಸ್ವರೂಪ ಮಹಿಳೆಯೇ ಎಂಬುದನ್ನು ವಿದ್ವಾಂಸರು ಗುರ್ತಿಸಿದ್ದಾರೆ. ಮಹಿಳಾ ಸಾಹಿತ್ಯ ಎಂಬುದಕ್ಕೆ ಅಸ್ತಿತ್ವ ಇದೆಯೇ, ಇದ್ದರೆ ಅದನ್ನು ಸಾಬೀತು ಪಡಿಸುವ ಮಾಹಿತಿ ದಾಖಲೆಗಳು ಏನಾದವು? ಎಂಬ ಪ್ರಶ್ನೆಗಳನ್ನು, ಅದಕ್ಕೆ ಅರ್ಹ ಉತ್ತರಗಳನ್ನು ಆಯ್ದ ವಚನಕಾರ್ತಿಯರಾದ ಆಯ್ದಕ್ಕಿ ಲಕ್ಕಮ್ಮ, ಮುಕ್ತಾಯಕ್ಕ, ನೀಲಲೋಚನೆ, ಗಂಗಾಂಬಿಕೆ, ಸೂಳೆ ಸಂಕವ್ವೆ ಇವರ ವಚನಗಳಲ್ಲಿ ಕಂಡುಬರುವ ಭಕ್ತಿ ಮತ್ತು ಕಾಯಕ ನಿಷ್ಠೆಯ ಮೂಲಕ ಮಹಿಳಾ ಸಾಹಿತ್ಯಕ್ಕೆ ಸೂಕ್ತ ಸ್ಥಾನ ಮಾನ ನೀಡುವ ವಿಚಾರವನ್ನು ಈ ಅಧ್ಯಯನದಲ್ಲಿ ವಚನಗಳ ಮೂಲಕ ಸ್ಪಷ್ಟೀಕರಿಸಲು ಪ್ರಯತ್ನಿಸಲಾಗಿದೆ.

ಸಮಾಜದ ದಿವ್ಯ ನಿರ್ಲಕ್ಷ್ಯದಿಂದಾಗಿ ಮಹಿಳಾ ಸಾಹಿತಿಗಳು ಸಂಶೋಧನೆಯ ಅಂಚಿನಿಂದ ಹೊರಗುಳಿಯುವ ಸಂಭವ ಇರುತ್ತದೆ. ಚೌಕಟ್ಟಿನ ವ್ಯಾಪ್ತಿಯಿಂದ ಹೊರಬಂದು ಸಮಾಜದಲ್ಲಿ ಉತ್ತಮ ಸ್ಥಾನಮಾನ ಹೊಂದಲು ಅವಕಾಶ ಕೊಡಬೇಕಾಗುತ್ತದೆ. ಈ ನಿಟ್ಟಿನಲ್ಲಿ ಅಧ್ಯಯನ ನಡೆಸುವುದು ಈ ಅಧ್ಯಯನದ ಉದ್ದೇಶವಾಗಿದೆ.

## ೧:೩. ಅಧ್ಯಯನದ ವ್ಯಾಪ್ತಿ

ಜ್ಞಾನ ಪ್ರಸಾರದ ದೊಡ್ಡ ಶಾಖೆಯಾಗಿ ಹೊರ ಹೊಮ್ಮಿದ ವಚನಗಳು ಅಂದಿನ ಬದುಕಿನ ನೈಜತೆಯನ್ನು ತೆರೆದಿಡುವಲ್ಲಿ ಸಫಲವಾಗಿವೆ. ಅದಕ್ಕೂ ಮಿಗಿಲಾಗಿ ಕೆಳಸ್ತರದಲ್ಲಿ ಬದುಕುತ್ತಿದ್ದ ಸ್ತ್ರೀಯರನ್ನು ಸಮಾಜಮುಖಿಯಾಗಿಸಲು ಪುರುಷನಷ್ಟೇ ಸ್ಥಾನಮಾನವನ್ನು ಕಲ್ಪಿಸಿವೆ. ಇಂತಹ ವಚನಗಳಲ್ಲಿ ನನ್ನ ಅಧ್ಯಯನದಲ್ಲಿ ಆಯ್ದಕ್ಕಿ ಲಕ್ಕಮ್ಮ, ಮುಕ್ತಾಯಕ್ಕ, ಗಂಗಾಂಬಿಕೆ, ನೀಲಾಂಬಿಕೆ ಮತ್ತು ಸೂಳೆಸಂಕವ್ವೆಯರ ಆಯ್ದ ವಚನಗಳನ್ನ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

ಅಧ್ಯಯನದ ವ್ಯಾಪ್ತಿಯು ಬೃಹತ್ ಆಗಿದ್ದು ಕಾಲಾವಕಾಶದ ಕೊರತೆಯಿಂದ ಸೀಮಿತ ಮತ್ತು ಸೂಚಿತ ವಸ್ತುವನ್ನಷ್ಟೇ ವಿವೇಚಿಸಲಾಗಿದೆ.

ಭಕ್ತಿ ಮತ್ತು ಕಾಯಕಗಳೆರಡು ಬೇರೆ ಬೇರೆ ಪದಗಳಾಗಿ ಕಂಡು ಬಂದರೂ ವಚನಕಾರರ ದೃಷ್ಟಿಯಲ್ಲಿ ಇವೆರಡೂ ಒಂದೇ ಆಗಿ ರೂಪಗೊಂಡಿದೆ. 'ಕಾಯಕವೇ ಕೈಲಾಸ' ಎಂಬ ವಚನ ಸಂಸ್ಕೃತಿಯ ತಳಹದಿ ಧ್ಯೇಯ ವಾಕ್ಯವನ್ನು ಸ್ವಲ್ಪ ವಿಮರ್ಶೆಗೆ ಒಳಪಡಿಸಿದರೆ 'ವ್ಯಕ್ತಿಯೊಬ್ಬ ತಾನು ಮಾಡುವ ಕೆಲಸವೇ ದೇವರಿಗೆ ಪೂಜೆ ಸಲ್ಲಿಸಿದಂತೆ' ಎಂಬ ಅರ್ಥಬರುತ್ತದೆ. ಅಂದರೆ ಪೂಜಾ ಕೈಂಕರ್ಯಗಳನ್ನಿಲ್ಲಿ ಬಿಟ್ಟು ತನ್ನ ವೃತ್ತಿಯನ್ನು ಆತ ಪ್ರಾಮಾಣಿಕವಾಗಿ ಮಾಡಿದಲ್ಲಿ ಅದೇ ದೇವರ ಪೂಜೆಯಾಗುತ್ತದೆ. ಹಾಗಾಗಿ ಅದು "ಕಾಯಕವೇ ಕೈಲಾಸ"ವಾಗುತ್ತದೆ. ಅಂದರೆ ಈ ಧ್ಯೇಯ ವಾಕ್ಯದಲ್ಲಿರುವ ಕಾಯಕವೇ ಕೈಲಾದವೆಂಬುದು ಭಕ್ತಿ ಮತ್ತು ಕಾಯಕನಿಷ್ಠೆಯ ಸಮಾನಾರ್ಥವೇ ಆಗಿದೆ. ಹಾಗಾಗಿ ಇಲ್ಲಿ ಭಕ್ತಿ ಬೇರೆ ಅಲ್ಲ, ಕಾಯಕ ನಿಷ್ಠೆ ಬೇರೆಯಲ್ಲ. ಆದ್ದರಿಂದ ಮೇಲೆ ಉಲ್ಲೇಖಿತರಾದ ವಚನಕಾರ್ತಿಯರು ತಮ್ಮ ಕಾಯಕದಲ್ಲಿ ಹೇಗೆ ಭಕ್ತಿಯನ್ನು ಅಳವಡಿಸಿಕೊಂಡಿದ್ದರು ಎಂಬುದು ಈ ಅಧ್ಯಯನದ ವ್ಯಾಪ್ತಿಗೆ ಒಳಪಟ್ಟಿದೆ. ಅದರಲ್ಲೂ ಸ್ತ್ರೀ ವಚನಕಾರ್ತಿಯರ ವಚನಗಳನ್ನೆಲ್ಲಾ ಇಲ್ಲಿ ಸಂಶೋಧನೆಗೆ ಒಳಪಡಿಸಿಲ್ಲ. ಕೇವಲ ಕೆಲವು ಆಯ್ದ ವಚನಕಾರ್ತಿಯರ ಕೆಲವು ವಚನಗಳನ್ನಷ್ಟೇ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಈ ವಚನಗಳಲ್ಲೂ ಕೂಡ ಸಾಮಾಜಿಕ ನಂಬಿಕೆ, ಗ್ರಾಮ್ಯ ಜೀವನ, ರಾಜಕೀಯ ಪ್ರಭಾವ, ವ್ಯಾಪಾರ – ವಹಿವಾಟು, ಸಾಮಾಜಿಕ ಸ್ಥಿತಿ, ಗತಿಗಳು ಈ ಎಲ್ಲ ಅಂತರ್ ಶಿಸ್ತೀಯ ವಿಮರ್ಶೆಗೆ ಒಳಪಡಿಸಿಲ್ಲ. ಕೇವಲ ಭಕ್ತಿ ಮತ್ತು ಕಾಯಕಕ್ಕೇ ಮಾತ್ರ ಈ ಅಧ್ಯಯನ ಸೀಮಿತವಾಗಿದ್ದು ಭಕ್ತಿಯ ಬೆಳಕು ಮತ್ತು ಕಾಯಕ ನಿಷ್ಠೆಯನ್ನು ಅತ್ಯಂತ ಪ್ರಕಾಶಮಾನವಾಗಿ ಹೊರಜಗತ್ತಿಗೆ ತೆರೆದಿಡುವುದರ ಜೊತೆಗೆ ವಚನಗಳ ಅಂತರಂಗದ ಭಾವ ಮತ್ತು ಉದ್ದೇಶವನ್ನು ಪ್ರಕಟಪಡಿಸುವುದೇ ಆಗಿದೆ.

# ಅಧ್ಯಾಯ ೨

## ವಚನಕಾರ್ತಿಯರಲ್ಲಿ ಭಕ್ತಿ ಮತ್ತು ಕಾಯಕ ನಿಷ್ಠೆ.

ಭರತಖಂಡದ ಭವ್ಯ ಇತಿಹಾಸದಲ್ಲಿ ಸಾಹಿತ್ಯವು ತನ್ನ ಹರವನ್ನು ವಿಸ್ತೃತಗೊಳಿಸಿಕೊಂಡಿದ್ದು, ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ ಹಾಗೂ ರಾಜಕೀಯ ನೆಲೆಗಳಿಂದ, ಮೌಖಿಕ ಸಾಹಿತ್ಯವೆಂದೇ ಪರಿಗಣಿತವಾದ ಜಾನಪದ ಸಾಹಿತ್ಯವು ಶಿಷ್ಟ ಸಾಹಿತ್ಯಕ್ಕಿಂತ ಭಿನ್ನವಾದುದು. ಏಕೆಂದರೆ ಅದು ಬಾಯಿಂದ ಬಾಯಿಗೆ ಹರಿದು ಬಂದಿರುವ ಸಾಹಿತ್ಯವಾಗಿರುವುದರಿಂದ ಪ್ರಾದೇಶಿಕವಾಗಿ ಭಿನ್ನತೆಯನ್ನು ಪಡೆಯುತ್ತಲೇ ತನ್ನ ಇರುವನ್ನು ಕಾಪಾಡಿಕೊಂಡು ತಲೆಮಾರಿನಿಂದ ತಲೆಮಾರಿಗೆ, ಸಮುದಾಯದಿಂದ ಸಮುದಾಯಕ್ಕೆ ಪೋಷಿಸಿಕೊಂಡು ಉಳಿದು ಬೆಳೆದು ಬಂದಿದೆ. ಆದರೆ ಶಿಷ್ಟ ಸಾಹಿತ್ಯಕ್ಕೆ ಬರಹವು ಅಧಿಕೃತವಾದ ನೆಲೆಯನ್ನು ರೂಪಿಸಿಕೊಟ್ಟಿತು. ಹಾಗಾಗಿ ಪ್ರತಿಯೊಂದು ವಿಚಾರಗಳು ದಾಖಲೆಗೊಂಡವು.

ಈ ದೃಷ್ಟಿಯಲ್ಲಿ ವಚನಕಾರರು ಕಟ್ಟಿಕೊಡುವ ಸಾಹಿತ್ಯವು ಮುಖ್ಯವಾಗಲು ಅನೇಕ ಕಾರಣಗಳಿವೆ. ಈ ಮೊದಲೆ ಭಾರತದಾದ್ಯಂತ ಪಸರಿಸಿದ ಬೌದ್ಧಧರ್ಮ, ಶಂಕರಾಚಾರ್ಯ ಅದ್ವೈತ, ಮಧ್ವರ ದ್ವೈತ ಧರ್ಮಗಳು ಜಟಿಲ ಹಾಗೂ ಸಂಕೀರ್ಣವಾಗಿದ್ದುದು. ಎರಡನೆಯ ಮುಖ್ಯಕಾರಣ ಬಾಹ್ಯ ಆಚರಣೆಗಳು, ಸಂಕೇತಗಳು ಶ್ರೇಣೀಕೃತ ಸಮಾಜವನ್ನು ಕಟ್ಟಿದ್ದು, ಮೂರನೆಯ ಮುಖ್ಯಕಾರಣವೆಂದರೆ ಚಂಪೂ ಸಾಹಿತ್ಯವನ್ನು ಮೆಟ್ಟಿನಿಲ್ಲುವ ಸಾಮಾಜಿಕ ಸ್ಥಿತಿ. ಉದಾಹರಣೆಗೆ: ಶ್ರೇಣೀಕೃತ ಸಮಾಜದಲ್ಲಿ ಅಂತ್ಯಜರನ್ನು ಕಾಣುವ ಹೀನಾಯ ಸ್ಥಿತಿಯು ಎಷ್ಟು ಅಸಹ್ಯವಾಗಿತ್ತು ಎಂಬುದಕ್ಕೆ ಒಂದು ನಿದರ್ಶನವೆಂದರೆ ಅಂದಿನ ಅಂತ್ಯಜರು ರಾಜಬೀದಿಗೆ ಬರುವುದೇ ಕಷ್ಟಕರವಾಗಿತ್ತು, ಒಂದೊಮ್ಮೆ ಬರುವುದಾದರೂ ಆತ ತನ್ನ ಕಾಲಿಗೆ ಗೆಜ್ಜೆಯನ್ನು ಕಟ್ಟಿಕೊಂಡು ಕೈಯಲ್ಲಿ ಕೋಲೊಂದನ್ನು ಹಿಡಿದು ಕೋಲನ್ನು ಕುಟ್ಟುತ್ತಾ 'ಸಂಬೋಳಿ', ಸಂಬೋಳಿ' ಎಂದು ಹೇಳುತ್ತಾ ಬರುವ ಕೆಟ್ಟ ಸಂಸ್ಕೃತಿಯಲ್ಲಿ ಅವರ ಬದುಕು ಅಸ್ಥಿರಗೊಂಡು ಒಂದೊಮ್ಮೆ ಅವರು ಮೇಲ್ವರ್ಗದವರನ್ನು ಸ್ಪರ್ಶಿಸಿದರೆ ಅಂತವರ ನಾಲಿಗೆ ಕತ್ತರಿಸುವುದು ಹಾಗೂ ಮೇಲ್ವರ್ಗದವರ ಮಾತನ್ನು ಆಲಿಸಿದರೆ, ಅಂತಹ ಅಂತ್ಯಜನ ಕಿವಿಗೆ ಸೀಸವನ್ನು ತುಂಬುವಂತಹ ಕಠೋರ ಪದ್ಧತಿಗಳನ್ನು ಹತ್ತಿಕ್ಕುವುದು ವಚನಕಾರರ, ವಚನಕಾರ್ತಿಯರ ಉದ್ದೇಶವಾಗಿತ್ತು. ಈ ದೃಷ್ಟಿಯಲ್ಲಿ ಹನ್ನೊಂದನೆಯ ಶತಮಾನದ ಉತ್ತರಾರ್ಧ ಹಾಗೂ ಹನ್ನೆರಡನೆಯ ಶತಮಾನದ

ಪೂರ್ವಾರ್ಧಗಳಲ್ಲಿ ಕರ್ನಾಟಕದ ಉದ್ದಗಲಕ್ಕೂ ರಾಜಕೀಯವಾಗಿ ಅಶಾಂತಿ, ಮತೀಯ ಘರ್ಷಣೆಗಳು ಉಂಟಾದವು. ಆ ಸಂದರ್ಭದಲ್ಲಿಯೇ ಜೈನಧರ್ಮದ ಅವನತಿಯಾಗಿತ್ತು. ಸಮಾಜದಲ್ಲಿ ರೂಢಿಮೂಲವಾದ ಪದ್ಧತಿಗಳು ಕಂದಾಚಾರಗಳು, ಯಜ್ಞ – ಯಾಗಾದಿಗಳು ಜನಮನದಲ್ಲಿ ಹಿಂಸಾರತಿಯನ್ನು ಉಂಟುಮಾಡಿದ್ದವು. ಈ ಕಾರಣಗಳಿಂದ ಬದುಕಿನಲ್ಲಿ ನಾವಿನ್ಯವನ್ನು ಕಂಡುಕೊಳ್ಳಲು ಮುಂದಾದ ಜನ ಹೊಸ ವಿಚಾರ, ಹೊಸದಾದ ಕಿರಣಗಳನ್ನು ಪಡೆದುಕೊಳ್ಳುವ ಮಾನಸಿಕ ಹಂಬಲತೆ ಹೆಚ್ಚಾಯಿತು. ಪ್ರತಿಫಲವಾಗಿ ಆ ಸಂದರ್ಭದಲ್ಲಿ ಶೈವ ಧರ್ಮವು ವೈಷ್ಣವ ಧರ್ಮಕ್ಕಿಂತ ಜಾಜ್ವಲ್ಯಮಾನವಾಗಿತ್ತು. ಶೈವಧರ್ಮದ ಒಂದು ಭಾಗವಾಗಿ ವೀರಶೈವ ಧರ್ಮವು ಹುಟ್ಟಿಕೊಂಡಿತು. ಇದು ಇಡೀ ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ಮೊದಲನೆಯ ನವೋದಯ ಪರಂಪರೆಯೆನ್ನಬಹುದು. ಬಹುಶಃ ಭಾರತದ ಜನ ಸಮುದಾಯಗಳ ಸಂದರ್ಭದಲ್ಲಿಯೇ ಈ ಪರಿಯ ಬೆಳವಣಿಗೆ ಕಾಣಲಾರದಷ್ಟು ಕರ್ನಾಟಕವು ಕಂಡುಕೊಂಡಿತು. ಈ ಎಲ್ಲದರ ಪ್ರತಿಫಲವಾಗಿ ಶ್ರೀಸಾಮಾನ್ಯನ ನಲಿವು ನೋವುಗಳಿಗೆ ಸ್ಪಂದಿಸುವ ಮಾರ್ಗದಲ್ಲಿ ಅಂದಿನ ವಚನಕಾರರು ತಾವೇ ಒಂದು ಸಾಹಿತ್ಯವನ್ನು ಕಟ್ಟಿಕೊಂಡರು. ಇದು ಕೇವಲವಾದ ಚಳುವಳಿಯಾಗದೆ ಪೂರ್ಣ ಪ್ರಮಾಣದ ಚಳುವಳಿಯಾಗಿದ್ದು, ಧಾರ್ಮಿಕ, ಸಾಹಿತ್ಯಿಕ, ಸಾಮಾಜಿಕ, ಸಾಂಸ್ಕೃತಿಕವಾಗಿ ಎಲ್ಲ ಆಯಾಮಗಳಿಂದಲೂ ಸಮಾಜದಲ್ಲಿರುವ ವಿವಿಧ ಸಮುದಾಯಗಳಲ್ಲಿ ವೈವಿಧ್ಯಮಯವಾದ ಕಾಯಕದಲ್ಲಿ ತೊಡಗಿರುವ ಜನರು ಆಕರ್ಷಿತರಾಗಿ ಬಂದು ಸೇರಿದರು. ಅಷ್ಟೇ ಅಲ್ಲದೆ, ಮೊಟ್ಟಮೊದಲಿಗೆ ಮಹಿಳೆಯರ ಪರವಾಗಿ ಬರೆಯುವ ಪ್ರಯತ್ನದ ಪ್ರತಿಫಲವಾಗಿ ಸೇರಿಕೊಂಡರು.

ಸಾಮಾಜಿಕ ಬದಲಾವಣೆಯನ್ನು ಬಯಸಿ ಇವರು ಕಟ್ಟಿಕೊಂಡ ಸಮುದಾಯಕ್ಕೆ ಶರಣ ಸಮುದಾಯವೆಂದು ನಾಮಕರಣದೊಂದಿಗೆ ಸ್ತ್ರೀಯರಿಗೂ ಆದ್ಯತೆಯನ್ನು ನೀಡಿ, ಸ್ತ್ರೀ ಸಮಾನತೆಯನ್ನು ಪ್ರತಿಪಾದಿಸಲು ಚಿಂತನೆ ನಡೆಸಲು ಅವಕಾಶ ಕಲ್ಪಿಸಿದ ಮೊಟ್ಟ ಮೊದಲಿಗರೆಂದರೆ ವಚನಕಾರರಾದ ಶರಣರು. ಇವರ ಕಾಲದಲ್ಲಿ ಸಾಹಿತ್ಯ ಕೃಷಿಗೆ ಕೈ ಜೋಡಿಸಿ ನಿಂತವರೆಂದರೆ ಅಕ್ಕಮಹಾದೇವಿ, ಮುಕ್ತಾಯಕ್ಕ, ಆಯ್ದಕ್ಕಿ ಲಕ್ಕಮ್ಮ, ಗಂಗಾಬಿಕೆ, ನೀಲಾಂಬಿಕೆ, ಸೂಳೆ ಸಂಕವ್ವೆಯವರೆಗೆ ಸುಮಾರು ಅರವತ್ತಕ್ಕೂ ಹೆಚ್ಚುಮಂದಿ ಮಹಿಳೆಯರು ತಮ್ಮ ಜೀವನಾನುಭವಗಳ ದಾಖಲೀಕರಣಕ್ಕೆ ಮುಂದಾಗಿ ನೂರಾರು ವಚನಗಳನ್ನು ಕಟ್ಟಿಕೊಟ್ಟರು.

" ಈ ಭಕ್ತಿ ಚಳುವಳಿಗಳು ಉಗಮಿಸಲು ಅನೇಕ ಕಾರಣಗಳಿವೆ.

೧. ಧಾರ್ಮಿಕತೆ ಅವನತಿಯತ್ತ ಹೋದಾಗ ಅದರ ಪರಿಷ್ಕರಣೆಗಾಗಿ ಭಕ್ತಿ ಚಳುವಳಿಗಳು ಹುಟ್ಟುಕೊಳ್ಳುತ್ತವೆ.

೨. ಸರಳ ಮತ್ತು ನೇರವಾದ ಮಾರ್ಗದಿಂದ ಸಮಾನತೆಯನ್ನು ಸಾಧಿಸುವುದರಿಂದ.

೩. ಜೀವನ ಮೌಲ್ಯಗಳನ್ನು ಕಟ್ಟಿಕೊಳ್ಳಲು ಒಂದು ಪ್ರೇರಣ ಶಕ್ತಿ ಅಗತ್ಯವಾಗುತ್ತದೆ. – ಅದು ಚಳುವಳಿಯಿಂದ ಮಾತ್ರ ಸಾಧ್ಯವಾಗುತ್ತದೆ.

೪. ಧಾರ್ಮಿಕ ಅಂಧಶ್ರದ್ಧೆ, ಮೌಢ್ಯತೆ, ಕಂದಾಚಾರಗಳನ್ನ ಹಳಿದು, ಸಾಮಾಜಿಕ ಪರಿವರ್ತನೆಗೆ ಹೋರುಡುವ ಪ್ರಯತ್ನದ ಫಲವಾಗಿ ಈ ಚಳಿವಳಿ ಉಗಮಿಸಿದವು.

೫. ಕಾಲದಿಂದ ಕಾಲಕ್ಕೆ ನಾಯಕತ್ವದ ಬದಲಾವಣೆಯ ಅಗತ್ಯತೆಯಿಂದಲೆ ಇಂತಹ ಚಳುವಳಿಗಳು ಉಗಮಿಸಲು ಕಾರಣೀಭೂತವಾಗಿವೆ.

೬. ಸಾಮಾಜಿಕ ಬದಲಾವಣೆಗಾಗಿ ಹಲವು ನಾಯಕರ ಅನುಯಾಯಿಗಳು ಚಳುವಳಿಯನ್ನು ಸಂಘಟನೆಯ ಮುಖೇನ ಮಾಡುವ ಪ್ರತಿಫಲವಾಗಿ ಚಳುವಳಿಗಳು ರೂಪುಗೊಂಡವು.

೭. ಜನ ಸಮುದಾಯದಲ್ಲಿ ಜಾತಿ, ವರ್ಗ, ಲಿಂಗಗಳನ್ನು ಲೆಕ್ಕಿಸದೆ, ವ್ಯಕ್ತಿಯ ಘನತೆಯುನ್ನು ಆತನ ಬೌದ್ಧಿಕತೆಯುನ್ನು ನೋಡಿ ಪರಿಗಣಿಸುವ ನಿಟ್ಟಿನಲ್ಲಿ ನೀತಿಮಾರ್ಗದತ್ತವಾಗಿ ಹುಟ್ಟಿಕೊಂಡವುಗಳೇ ಭಕ್ತಿ ಚಳುವಳಿಗಳಾಗಿವೆ.

೮. ಸಾಮಾಜಿಕವಾಗಿ ಅಸ್ಥಿರತೆಗಳು ಉಂಟಾಗಿ, ಅನ್ಯಾಯಗಳ ಬಗೆಗೆ ಜನ ಸಮುದಾಯದಲ್ಲಿ ಅಸಮಾನತೆ ಕಂಡುಬರುವಲ್ಲಿ, ವಾಸ್ತವವಾಗಿ ಜನರು ಅವುಗಳನ್ನು ಹತ್ತಿಕ್ಕಲು ಆಗದಿರುವಾಗ, ಅವರನ್ನು ಅನ್ಯಾಯದಿಂದ ಮುಕ್ತರನ್ನಾಗಿಸುವ ದಾರಿದೀಪವಾಗಿ ಒಬ್ಬ ನಾಯಕನಾಗಿ, ವ್ಯಕ್ತಿಯೊಬ್ಬ ರೂಪುಗೊಳ್ಳುತ್ತಾನೆ. ಆತನ ಮಾರ್ಗದಲ್ಲಿ ಹಲವು ಮಂದಿ ನಡೆದುಕೊಳ್ಳುವುದೇ ಭಕ್ತಿ ಚಳುವಳಿಯ ಉಗಮಕ್ಕೆ ಕಾರಣವಾಗುತ್ತದೆ."[೧] ಎನ್ನುತ್ತಾರೆ ಡಾ. ಹಾ. ಮ. ನಾ ರವರು.

ಶರಣರ ಆಂದೋಲನವನ್ನು ಮಧ್ಯಕಾಲೀನ ಸಾಹಿತ್ಯದ ಬಹುದೊಡ್ಡ ಚಳುವಳಿಯೆಂದು ಕೊಂಡರೂ. ಇದು ನೀಡಿದ ಮಹತ್ವದ ಸಾಹಿತ್ಯವೆಂದರೆ ಅದುವೆ ವಚನ ಸಾಹಿತ್ಯ. ವಚನವೆಂಬುದು ಬಹುತ್ವದ ಅರ್ಥ ಪರಿಭಾಷೆಗಳನ್ನು ಹೊಂದಿದ್ದು, ಕೇವಲ ವಚನದಲ್ಲಿ ಸಾಮಾನ್ಯವಾದ ಅರ್ಥದಲ್ಲಿ ಮಾತು, ಭಾಷೆ, ಪ್ರಮಾಣ, ಪ್ರತಿಜ್ಞೆ, ಪ್ರಾಮಾಣಿಕತೆ, ಖರೆ, ನಿಜ, ದಿಟ, ನೈಜತೆ, ಸತ್ಯ ಹೀಗೆ ನೂರೆಂಟು ಅರ್ಥಗಳನ್ನು ಅರ್ಥೈಸಿದಷ್ಟು ವ್ಯಾಪ್ತಿಯನ್ನು ವಿಸ್ತರಿಸಿಕೊಳ್ಳುವ ಈ ಪರಿಭಾಷೆಯು ಜನಮಾನಸದಲ್ಲಿ ಸ್ಥಾಯಿಯಾಗಲು ಕಾರಣವಾಯಿತು. ವಚನಗಳು ಜನಸಾಮಾನ್ಯರಿಗೂ ತಿಳಿಯಲು ಸರಳವಾದ ಭಾಷಿಕತೆಯಲ್ಲಿ ಕಟ್ಟಿಕೊಡಲ್ಪಟ್ಟವು, ಇವು ಜೀವನಾನುಭವಗಳನ್ನು ಏಕಮುಖಿಯಾಗಿ ಕೊಡದೆ ಬಹುಮುಖಿಯಾಗಿಸುವಲ್ಲಿ ಸಾರ್ಥಕ್ಯ ಪಡೆದಿವೆ.

---

**ಕೊನೆ ಟಿಪ್ಪಣಿ**

೧. ವಚನ: ವ್ಯಕ್ತಿತ್ವ ವಿಕಾಸ. ಡಾ. ಹಾ. ಮ. ನಾಗಾರ್ಜುನ. ದೇಸಿ ಪುಸ್ತಕ. ವಿಜಯನಗರ. ಬೆಂಗಳೂರು. ೨೦೧೧ ಪುಟ – ೫೯.

# ಕಾಯಕ ತತ್ವ

ಸೃಷ್ಟಿಯ ವಿವಿಧೋದ್ದೇಶಗಳ ಮೂಲ "ಕಾಯಕ", 'ಕಾಯಕ' ಎಂದರೆ ಕೆಲಸ, ಕಾರ್ಯ, ಬದುಕು, ಬಾಳು ಹೀಗೆ ಹಲವು ಹತ್ತು ಭಾಷಿಕವಾದ ಹಾಗೂ ಪ್ರಾದೇಶಿಕವಾದ ನಾನಾ ಅರ್ಥಗಳನ್ನು ಪಡೆದಿವೆ. "ಕಾಯಕ" ಶಬ್ದ ಬಹುಪಾಲು ಬಳಕೆಯಾದುದು ಬಸವಾದಿ ಪ್ರಮಥರಿಂದ. ಈ ಶಬ್ದವು ಹೆಚ್ಚು ಪ್ರಚಾರಕ್ಕೆ ಬಂದಿದ್ದು ಹನ್ನೆರಡನೆ ಶತಮಾನದ ಶರಣರ ಜೀವ ಜೀವಾಳವಾದ ಕೈಕಂರ್ಯಕ್ಕೆ ಕೊಟ್ಟ ಪರ್ಯಾಯ ಪದದ ಹೊಸ ನೆಲೆಯ ರೂಪದಿಂದ.

ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿರುವ ಸಂಕ್ಷಿಪ್ತ ಕನ್ನಡ ನಿಘಂಟುವಿನಲ್ಲಿ "ಕಾಯಕ" ಎಂಬ ಪದಕ್ಕೆ ಕಸುಬು, ದುಡಿಮೆ ಎಂಬರ್ಥವಿದ್ದರೆ[೧] ಕನ್ನಡ ಕ್ಲಿಷ್ಟ ಪದಕೋಶದಲ್ಲಿ ಈ ಪದಕ್ಕೆ ಶರೀರ ಸಮರ್ಪಣ ಭಾವದಿಂದ ಮಾಡುವ ವೃತ್ತಿ ಕೈಂಕರ್ಯ ಎಂಬ ಅರ್ಥ ನೀಡಿದ್ದಾರೆ.[೨]

"ಕಾರ್ಯ" ಎಂಬುದು ಮಾನವ ಬದುಕಿನ ಅವಿಭಾಜ್ಯ ಅಂಗವಾಗಿದ್ದು, ಅದರ ಬಳಕೆಗೆ ಎರಡು ರೂಪಗಳನ್ನು ಹೀಗೆ ಕಾಣಬಹುದು. 'ಶಿಲೆಯೊಂದಕ್ಕೆ ಶಿಲ್ಪಿ ಕೊಟ್ಟ ಉಳಿಯ ಸಹಸ್ರಾರು ಪೆಟ್ಟುಗಳಿಗೆ ಒಂದು ಸುಂದರ ಪಾವನ ಮೂರ್ತಿ ಅವತಾರ ಎತ್ತುವುದು' ಹಾಗೆಯೇ ಮರದ ತುಂಡೊಂದನ್ನು ಕೆತ್ತಿ ಸುಂದರಾಕೃತಿಯನ್ನು ಕಾಣಿಸಿದುದು ಕಾಯಕದಿಂದಲೇ ಅಂತಹ ಕಾಯಕಕ್ಕೆ ಅದರದೇ ಆದ ಮೌಲ್ಯಗಳಿವೆ ಎಂಬುದನ್ನು ಸ್ಪಷ್ಟೀಕರಿಸುತ್ತವೆ.

ಮೌನಕ್ಕೆ ಮಾತುಂಟು ನೋಡು ಬಾ ಇಲ್ಲುಂಟು ಶಿಲೆಯ ಕಲೆಯಾಗಿಸುವ ನಂಟೆ ಮಾತು ಮೌನಕ್ಕಿಳಿಸಿದ ಗಂಟೆ ಎಂಬ ಕವಿ ವಿರಚಿತ ಈ ಚರಣಗಳು 'ಕಾಯಕತತ್ವ'ವನ್ನು ಮೆರೆಯುವಂತಿವೆ. ಸುಂದರ ಹೆಣ್ಣೊಂದರ ಸೌಂದರ್ಯವನ್ನು ಕಂಡು ಮುಗ್ಧ ಯುವಕನ ಭಾವದಲ್ಲಿ ಅದೇ ಕುರೂಪಿಯಾದ ಹೆಣ್ಣನ್ನು ಕಂಡು ಸಿಂಡರಿಸುವ ಭಾವವು ಅಡಗಿರುತ್ತದೆ. ಇದು ಸೌಂದರ್ಯ ಪ್ರಜ್ಞೆಯ ಕಾಯತತ್ವವನ್ನು ಪ್ರತಿನಿಧಿಸುತ್ತದೆ.

ಸತ್ಯಶೋಧಕನಾಗಲಿ, ಸೃಷ್ಟಿಯ ವಿಜ್ಞಾನಿಯಾಗಲಿ, ಆಳತಿಳಿವ ಸನ್ನಾಹ ಮಾಡಿದಾಗ ಸೃಷ್ಟಿಮಾತೆಗೆ ಸಂತೋಷವೇ ಆದಿತೆಂದು ಹೇಳಬಹುದು ಅಂದರೆ ಅವರುಗಳಲ್ಲಿ ಬೆಸಗೊಂಡ 'ಕಾಯಕ ಪ್ರವೃತ್ತಿ' ಸೃಷ್ಟಿಗೆ ಎಂದೆಂದಿಗೂ ಬೇಕಾದ ಶುಭಕಾರ್ಯ. ಸೃಷ್ಟಿಗೆ ಪರಿಣಾಮ ಗೌಣವಾದರೂ 'ಕಾಯಕ' ಗೌಣವಾಗಬಾರದೆಂದೇ ಅದರ ಇಚ್ಛೆ. ಅಂತೇ ಸೃಷ್ಟಿಯ ಮೂಲದಲ್ಲಿ 'ಕಾಯಕ' ತತ್ವದ ಅಸ್ತಿತ್ವವಿರುತ್ತದೆ.

"ಕಾಯಕದ ಬಾಳು ಅಮರವಾದುದು, ಬಾಳ ಬದುಕನ್ನು ಮೇಲೇಳಿಸುವ ಬಾಳಿಗೆ ಮೂಲೋದ್ದೇಶವನ್ನು ಅರಿತು ಅದರಂತೆ ನಡೆಯುವುದೇ 'ಕಾಯಕ' ಕಾಯಕ ಬೆಲೆಯು ನೂರಂದಕ್ಕಿಲ್ಲ, ಕೋಟಿಗಿಲ್ಲ ಶುದ್ಧ ಕಾಯಕ ಒಂದಾದರೆ ಅದೇ ಅಗಣಿತ ಕೈಲಾಸವಿದ್ದಂತೆ. ಹೀಗೆ ಕಾಯಕ ಮಹತ್ವ ಅರಿತ ಸನಾತನರು ನುಡಿದ ನುಡಿಮುತ್ತುಗಳಾಗಿವೆ".[೩]

ವಚನಕಾರರ ಪರಿಭಾಷೆಯಲ್ಲಿ ಕಾರ್ಯವೆಂಬುದು ಸತ್ಯ ಶುದ್ಧವಾದುದು. ಇದು'ಚಿತ್ತ ಶುದ್ಧ ಕಾಯಕಮಾಡುವ ಸದ್ಭಕ್ತನ ಮನೆಯಲ್ಲಿ ಎತ್ತ ನೋಡಿದರತ್ತ ಲಕ್ಷ್ಮಿ ತಾನೇ ತಾನಾಗಿದ್ದಳು" ಎಂದಿದ್ದಾರೆ. ಇಂತಹ ಕಾಯಕ ಕೇವಲ ವೈಯುಕ್ತಿಕವಾದುದಾಗಿರದೆ ಅದೊಂದು ಸಾಮಾಜಿಕ ಸೇವೆಯಾಗಿತ್ತು.

ಇಂತಹ ಕಾಯಕ ಕುರಿತು ಆಯ್ದಕ್ಕಿ ಮಾರಯ್ಯನ ಅರ್ಧಾಂಗಿ ಶರಣೆಯಾದ ಆಯ್ದಕ್ಕಿ ಲಕ್ಕಮ್ಮನು ನುಡಿದ ವಚನ ಈ ರೀತಿ ಇದೆ-

"ಆಸೆ ಎಂಬುದು ಅರಸಂಗಲ್ಲದೆ ಶಿವಭಕ್ತರಿಗುಂಟೆ?
ರೋಷವೆಂಬುದು ಯಮದೂತರಿಗಲ್ಲದೆ ಅಜಾತರಿಗುಂಟೆ?
ಎಲೆ ಅಯ್ಯಾ ಈಸಕ್ಕಿಯ ಆಸೆ ನಿಮಗೇಕೆ? ಈಶ್ವರನೊಪ್ಪ"

ಪ್ರತಿ ದಿನಕ್ಕಿಂತ ಅಂದು ಹೆಚ್ಚಿಗೆ ಆಯ್ದು ತಂದ ಅಕ್ಕಿಯ ಗಂಟನ್ನು ಮಾರಯ್ಯನ ಕೈಯಲ್ಲಿಟ್ಟು ನಂತರ ಬಸವಣ್ಣನವರ ಮನೆಗೆ ಕಳುಹಿಸಿಕೊಟ್ಟ "ಕಾಯಕದ ಪರಿ ಇದಾಗಿದೆ".[೪]

ಕಾಯಕ ಎಂಬುದು ದೇಹ ಸಂಬಂಧವಾದುದು. ಇದು ಮಾನಸಿಕ ಶ್ರಮವನ್ನು ತಾಳುವುದನ್ನೇ ಶರಣರು ಕಾಯಕವೆಂದು ಕರೆದಿದ್ದಾರೆ. ಶ್ರಮ ಜೀವಿಗಳು ಅಗತ್ಯಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ ಉತ್ಪಾದಿಸಬೇಕಿದ್ದ ಅನಿವಾರ್ಯತೆಯನ್ನು ಶರಣರು ಚಿಂತಿಸುವುದು ಕಂಡುಬರುತ್ತದೆ.

ಪ್ರತಿಯೊಬ್ಬನೂ ಉಪಜೀವನಕ್ಕಾಗಿ ಒಂದು ಕಾಯಕವನ್ನು ಮಾಡಲೇಬೇಕು. ವೃತ್ತಿಯನ್ನು ಅತ್ಯಂತ ಗೌರವ ಭಾವದಿಂದ ನಡೆಸುವುದು, ಹಾಗೆಯೇ ತನ್ನ ವೃತ್ತಿಗೆ ತಕ್ಕಷ್ಟು ಮಾತ್ರ ಪ್ರತಿಫಲ ಪಡೆಯುವುದು, ವೃತ್ತಿಯಿಂದ ಸಂಪಾದಿಸಿದ ಹಣವನ್ನು ದಾಸೋಹಕ್ಕೆ ಖರ್ಚುಮಾಡುವುದು, ಕೊನೆಯದಾಗಿ ವೃತ್ತಿಗಳೆಲ್ಲವೂ ಸಮಾನವಾದವುಗಳೆಂದು ಸಾರಿದ ಕೀರ್ತಿ ವಚನಕಾರ್ತಿಯರದಾಗಿದೆ.

ಸಾಮಾಜಿಕವಾಗಿ ಮೇಲು-ಕೀಳೆಂಬ ಮನೋಭಾವಕ್ಕೆ ಕಾಯಕ ತತ್ವದ ಮೂಲಕ ಹೊಸ ತಿರುವನ್ನು ನೀಡಿದರು. ಸಾಮಾನ್ಯರ ಹೃದಯದ ಮಿಡಿತವನ್ನು ಬಲ್ಲವರಾದ ಶರಣರು ಸಾಮಾನ್ಯನೂ ಪ್ರಾಮಾಣಿಕನಾಗಿಯೂ, ಉತ್ತಮಿಕೆಯ ನಡೆತೆಯಿಂದಲೂ, ತನ್ನ ವೃತ್ತಿಯನ್ನು ನಡೆಸುವುದಲ್ಲದೆ, ಅದು ಆತನ ಆತ್ಮೋನ್ನತಿಗೂ ಕಾರಣವಾಗುವಂತೆ ನಡೆದುಕೊಳ್ಳುವಲ್ಲಿ ಪರಸ್ಪರವಾಗಿ ಅರಿತಿದ್ದರು.

"ವಚನಕಾರರಷ್ಟೇ ವಚನಕಾರ್ತಿಯರೂ ತಮ್ಮ ಕಾಯಕವನ್ನು ಮಾಡುವಲ್ಲಿ ಸೂಳೆ ಸಂಕವ್ವೆಯಂತಹವಳು ತನ್ನ ಕಾಯಕದ ಬಗ್ಗೆ ನೇರವಾಗಿ ಹೇಳಿ ಕೊಂಡಿರುವುದನ್ನು ಈ ವಚನದಲ್ಲಿ ಹೇಳಿದ್ದಾಳೆ.

ಒತ್ತೆಯ ಹಿಡಿದು ಮತ್ತೊತ್ತೆಯ ಹಿಡಿಯೆ;
ಹಿಡಿದಡೆ ಬತ್ತಲೆ ನಿಲಿಸಿ ಕೊಲುವಯ್ಯ
ವ್ರತಹೀನನರದು ಬೆರೆದಡೆ
ಕಾದ ಕತ್ತಿಯಲ್ಲಿ ಕೈ ಕಿವಿ ಮೂಗು ಕೊಯ್ವರಯ್ಯ
ಒಲ್ಲೆನೊಲ್ಲೆ, ಬಲ್ಲೆನಾಗಿ, ನಿಮ್ಮಾಣೆ ನಿರ್ಲಜ್ಜೇಶ್ವರಾ" ²

ಹೆಸರೇ ಸೂಚಿಸುವಂತೆ ವೇಶ್ಯಾವೃತ್ತಿಯಲ್ಲಿರುವ ಇವಳು ವಂಶಪಾರಂಪರ್ಯವಾಗಿ ಬಂದ ಆ ವೃತ್ತಿಯನ್ನು ಆಕೆಯು ತನ್ನ ತುಂಬು ಮನಸ್ಸಿನ ನಿಷ್ಠೆಯಿಂದ ನಡೆಸುತ್ತಿದ್ದ ಬಗೆ ಒಮ್ಮುಖವಾದ ನಿಷ್ಠೆಯಿಂದ ವ್ಯಕ್ತವಾಗಿದೆ.

ಈ ವಚನದಲ್ಲಿ ಒಬ್ಬನಿಂದ ಒತ್ತೆಯನ್ನು ಸ್ವೀಕರಿಸಿ, ಆತನೊಡನೆ ಕೂಡುವೆನೆಂದು ಒಪ್ಪಿಗೆಯನ್ನು ಕೊಟ್ಟ ಮೇಲೆ, ಮತ್ತೊಬ್ಬನನ್ನು ಕೂಡದಿರುವುದು, ಅದೇ ರೀತಿಯಾಗಿ ತಾನು ಬೆರೆಯುವುದು ಕೇವಲ ಭಕ್ತರೊಡನೆ ಹೊರತು, ಭವಿಗಳೊಡನೆ ಅಲ್ಲ ಎಂಬುದನ್ನು ಸಾಬೀತುಗೊಳಿಸಿದ್ದಾಳೆ. ಇಲ್ಲಿ ಆಕೆಗೆ ತನ್ನ ವೃತ್ತಿಯು ಕೀಳೆಂಬ ಭಾವನೆಯಾಗಲೀ, ತಾನು ಅದನ್ನು ಅನುಸರಿಸುತ್ತಿರುವುದು ಕೆಟ್ಟದೆಂದು ತಿಳಿಯದೆ, ಅದು ವೃತ್ತಿಯಷ್ಟೆ ಪವಿತ್ರವುಳ್ಳದೆಂಬ ಭಾವನೆ ವ್ಯಕ್ತವಾಗುತ್ತದೆ.

*ಕೊನೆ ಟಿಪ್ಪಣಿ*

೧. ಸಂಕ್ಷಿಪ್ತ ಕನ್ನಡ ನಿಘಂಟು, ಕನ್ನಡ ಸಾಹಿತ್ಯ ಪರಿಷತ್ತು. ೧೯೭೫

೨. ಕನ್ನಡ ಕ್ಲಿಷ್ಟ ಪದಕೋಶ . ಸಂ. ಪ್ರೋ ಜಿ. ವೆಂಕಟಸುಬ್ಬಯ್ಯ, ಪ್ರಿಸಮ್ ಬುಕ್ ಪ್ರೈ. ಲಿ. ಬೆಂಗಳೂರು – ೨೦೧೦

೩. ವಚನ: ವ್ಯಕ್ತಿತ್ವ ವಿಕಾಸ. ಡಾ. ಹಾ. ಮ. ನಾಗಾರ್ಜುನ. ದೇಸಿ ಪುಸ್ತಕ. ವಿಜಯನಗರ. ಬೆಂಗಳೂರು. ೨೦೧೧. ಪುಟ ೭೮.

೪. ವಚನ: ವ್ಯಕ್ತಿತ್ವ ವಿಕಾಸ. ಡಾ. ಹಾ. ಮ. ನಾಗಾರ್ಜುನ. ದೇಸಿ ಪುಸ್ತಕ. ವಿಜಯನಗರ. ಬೆಂಗಳೂರು. ೨೦೧೧. ಪುಟ ೭೯.

೫. ಸಮಗ್ರ ವಚನ ಸಂಪುಟ – ೫. ಶಿವಶರಣೆಯರ ವಚನ ಸಂಪುಟ ಸಂಪಾದಕ ಡಾ. ವೀರಣ್ಣ ರಾಜೂರ, ಕರ್ನಾಟಕ ಸರ್ಕಾರ, ಕನ್ನಡ ಪುಸ್ತಕ ಪ್ರಾಧಿಕಾರ. ಬೆಂಗಳೂರು –೨೦೦೧. ಪುಟ ೬೮.

# ಅಧ್ಯಾಯ ೩

## ಆಯ್ದ ವಚನಕಾರ್ತಿಯರು

ಶಿವಶರಣ ವಚನಕಾರರು ಸಾಮಾಜಿಕವಾಗಿ ಮೂಡಿಸಿದ ಜಾಗೃತಿ ಮತ್ತು ಆತ್ಮ ವಿಶ್ವಾಸಗಳು ಅನನ್ಯವಾದವಾಗಿವೆ. ಸರ್ವವನ್ನು ಒಳಗೊಂಡ ವಚನ ಸಾಹಿತ್ಯದಂತಹ ಸಾಹಿತ್ಯ ಪ್ರಪಂಚದ ಯಾವ ಸಾಹಿತ್ಯದಲ್ಲೂ ಇಲ್ಲವೆಂದರೆ ಅತಿಶಯೋಕ್ತಿಯಲ್ಲ.

ಶಿವ ಶರಣ ಶರಣೆಯುವರು ಅನಕ್ಷರಸ್ಥರಾದರೂ ತಮ್ಮ ಕುಲಕಸುಬುಗಳಿಗೆ ಮಾನ್ಯತೆ ಕೊಟ್ಟು, ವೃತ್ತಿಯು ಮತ್ತು ಜಾತಿಯು ಹೆಸರನ್ನು ತಮ್ಮ ಹೆಸರಿನೊಂದಿಗೆ ಸೇರಿಸಿಕೊಂಡಿರುವಂತಹದ್ದು ಕಾಯಕದ ಬಗೆಗೆ ಅವರಿಗಿದ್ದ ಒಲವನ್ನು ಎತ್ತಿತೋರಿಸುವುದಾಗಿದೆ. ಹಡಪದ ಅಪ್ಪಣ್ಣ, ಅಂಬಿಗರ ಚೌಡಯ್ಯ, ಮಾದಾರ ಚನ್ನಯ್ಯ, ಆಯ್ದಕ್ಕಿ ಲಕ್ಕಮ್ಮ, ಸೂಳೆ ಸಂಕವ್ವೆ ಇವು ಕೇವಲ ಅವರ ಹೆಸರನ್ನಷ್ಟೇ ಅಲ್ಲ ವೃತ್ತಿಯನ್ನು ಜಾತಿಯನ್ನು ಸೂಚಿಸುತ್ತವೆ.

ಕಾಯಕ ಜೀವಿಗಳ ವಚನ ಚಳುವಳಿ, ಕುಶಲ ಕಲೆಗಾರರ ಸಮಾಜದಲ್ಲಿ ಕಾಯಕ ಧರ್ಮಗಳಾದ ನೆಯ್ಗೆ, ಕುಂಬಾರಿಕೆ, ಇವೇ ಮೊದಲಾದ ಕಾಯಕ ಧರ್ಮಗಳನ್ನು ಸಾರುವುದಾಗಿದೆ. ದುಡಿಮೆ ಆರ್ಥಿಕ ಸಿದ್ಧಾಂತದ ಮೂಲ ಬೇರಾಗಿ, ಕಾಯಕ ಶಿವಶರಣ ಶರಣೆಯರ ಆರ್ಥಿಕ ಚಿಂತನೆಗೂ ಕಾರಣವಾಗಿದೆ. ಕ್ರಿಯಾಶಕ್ತಿಯನ್ನು ಮೂಲ ಬಂಡವಾಳವನ್ನಾಗಿ ಮಾಡಿಕೊಂಡು ಸತ್ಯ ಶುದ್ಧ ಕಾಯಕದಿಂದ ನೇಮದ ಕೂಲಿ ಪಡೆದ ಇವರು ಶ್ರಮಕ್ಕೆ ತಕ್ಕ ಪ್ರತಿಫಲವನ್ನು ಪಡೆದಿದ್ದಾರೆ.

ಶಿವಶರಣ ಶರಣೆಯರು ಭಕ್ತಿಯನ್ನು ಕೇವಲ ದೇವರಲ್ಲಿ ಮಾತ್ರವಲ್ಲ, ಕಾಯಕದಲ್ಲೂ ಹೊಂದಿದ್ದರು. ಕಾಯಕವೇ ಭಕ್ತಿ, ಭಕ್ತಿಯೇ ಕಾಯಕ ಎಂದವರು ನಂಬಿದ್ದರು. "ಕಾಯಕದಲ್ಲಿ ನಿರತನಾದಡೆ ಗುರುದರ್ಶನವಾದರೂ ಮರೆಯಬೇಕು" ಎನ್ನುವಂತಹ ವಚನಗಳು ಈ ಮಾತನ್ನು ಸಾಬೀತುಪಡಿಸುತ್ತವೆ.

ಶಿವಶರಣೆಯರು ಆ ಕಾಲದ ಸಮಾಜದಲ್ಲಿ ಜಡ್ಡುಗಟ್ಟಿದ್ದ ಕುರುಡು ಸಂಪ್ರದಾಯ, ಆಚರಣೆ, ಮೂಢನಂಬಿಕೆ – ಮೊದಲಾದವುಗಳ ಮೇಲೆ ತಮ್ಮ ಭಕ್ತಿ, ಪ್ರೀತಿ, ವಿಶ್ವಾಸದ ಬೆಳಕನ್ನು ಹರಿಸುವ ಪ್ರಯತ್ನವನ್ನು ಮಾಡಿದ್ದಾರೆ.

# ೩: ಅ. ಆಯ್ದಕ್ಕಿ ಲಕ್ಕಮ್ಮ

೧೨ನೇ ಶತಮಾನದ ಸುಪ್ರಸಿದ್ಧ ಶರಣ ದಂಪತಿಗಳಾದ ಆಯ್ದಕ್ಕಿ ಮಾರಯ್ಯ , ಆಯ್ದಕ್ಕಿ ಲಕ್ಕಮ್ಮ ತ್ರಿವಿಧ ದಾಸೋಹ ತತ್ವದಂತೆ ಬಾಳಿ ಬದುಕಿದವರು. ಕಾಯಕನಿಷ್ಠೆ, ಅಂತರಂಗ ಶುದ್ಧಿಯುಳ್ಳ ಪರಿಪೂರ್ಣ ಭಕ್ತಿಯನ್ನು ಜೀವನದ ಕ್ರಮದಲ್ಲಿ ತೊಡಗಿಸಿಕೊಂಡು ಬಾಳಿದವರು. ಆಯ್ದಕ್ಕಿ ಲಕ್ಕಮ್ಮ ಅತ್ಯಂತ ನಿಷ್ಠುರವಾದಿಯಾದ ವಚನಕಾರ್ತಿ.

ಆಯ್ದಕ್ಕಿ ಲಕ್ಕಮ್ಮನ ೨೫ ವಚನಗಳು ಲಭ್ಯವಾಗಿವೆ. ಈಕೆಯ ಅಂಕಿತ ಮಾರಯ್ಯ ಪ್ರಿಯ ಅಮರೇಶ್ವರಲಿಂಗ. ಎಲ್ಲವೂ ಸನ್ನಿವೇಶ ಪ್ರೇರಣೆಯಿಂದ ಹುಟ್ಟಿದುವಾದುದರಿಂದ ಬಿಡಿ ಬಿಡಿಯಾಗಿದ್ದರೂ ಅವುಗಳಲ್ಲಿನ ಭಾವದಲ್ಲಿ ಏಕಸೂತ್ರತೆ ಕಂಡು ಬರುತ್ತದೆ.

ಶಿವಶರಣೆಯರಲ್ಲಿ ಆಯ್ದಕ್ಕಿ ಲಕ್ಕಮ್ಮನಿಗೆ ಒಂದು ವಿಶಿಷ್ಟವಾದ ಸ್ಥಾನವಿದೆ. ಶರಣ ಸಂಸ್ಕೃತಿಯು ಸಾಕಾರರೂಪವಾಗಿರುವ ಲಕ್ಕಮ್ಮನ ಆದರ್ಶಮಯ ಜೀವನ ಮಾದರಿಯುತವಾದುದು. ಅದನ್ನು ಅಳವಡಿಸಿಕೊಳ್ಳುವುದುರ ಮೂಲಕ ಜೀವನ ಸಾರ್ಥಕತೆ ಪಡೆಯಬಹುದು.

ಲಕ್ಕಮ್ಮ, ಆಯ್ದಕ್ಕಿ ಮಾರಯ್ಯನ ಹೆಂಡತಿ. ಇವರ ಜೀವನ ವೃತ್ತಾಂತಗಳು ಸಾಧನೆಗಳು ತುಂಬಾ ಕುತೂಹಲಕಾರಿಯಾಗಿವೆ. ರಾಯಚೂರಿನ ಅಮರೇಶ್ವರ ಗ್ರಾಮ ಇವರ ಸ್ವಂತ ಊರಾಗಿದೆ. ತನ್ನ ಸ್ವಂತ ಊರನ್ನು ತೊರೆದು ಕಲ್ಯಾಣಕ್ಕೆ ಬಂದು ದಾಸೋಹದ ಮೂಲಕ ಜೀವನ ಸಾಗಿಸುತ್ತಾರೆ. ಇವರು ಅಮರೇಶ್ವರದಿಂದ ಕಲ್ಯಾಣಕ್ಕೆ ಬರಲು ಮುಖ್ಯವಾದ ಕಾರಣ ಬಡತನ ಮತ್ತು ಕಲ್ಯಾಣದಲ್ಲಿನ ಸಾಮಾಜಿಕ, ಧಾರ್ಮಿಕ ಚಟುವಟಿಕೆಗಳು. ಇವರ ಬಡತನದ ಬಗ್ಗೆ ಕಾವ್ಯಗಳಲ್ಲಿ ಉಲ್ಲೇಖವಿದೆ. ಯಾವ ಜಾತಿ ಎನ್ನುವ ಬಗ್ಗೆ ಸಾಕಷ್ಟು ಆಧಾರಗಳಿಲ್ಲ. ಆದರೆ ಶೂದ್ರವರ್ಗಕ್ಕೆ ಸೇರಿದವರೆನ್ನುವುದು ಸ್ಪಷ್ಟ. ಮಾರಯ್ಯನ ವಚನದ ಅಂಕಿತ ಅಮರೇಶ್ವರ ಲಿಂಗ ವಾದರೆ ಲಕ್ಕಮ್ಮನ ಅಂಕಿತ "ಮಾರಯ್ಯ ಪ್ರಿಯ ಅಮರೇಶ್ವರ ಲಿಂಗವಾಗಿದೆ".

ಇವರಿಬ್ಬರು ಶಿವಶರಣರು. ಶಿವನ ಭಕ್ತರು. ಲಕ್ಕಮ್ಮ ಪತಿಗೆ ಪ್ರಿಯವಾದ ಶಿವನಾಮಾಂಕಿತದಿಂದಲೇ ತನ್ನ ವಚನಾಂಕಿತವನ್ನು ಸೇರಿಸಿ ವಚನ ರಚಿಸಿದ್ದಾಳೆ.

ಬಡತನದಲ್ಲಿ ಹುಟ್ಟಿ ಬೆಳೆದು, ಬೆಂಕಿಯಲ್ಲಿ ಅರಳಿದ ಹೂಗಳು ಇವರಾಗಿದ್ದಾರೆ. ಈ ಶರಣ ದಂಪತಿಗಳ ಹೆಸರಿನಲ್ಲಿ "ಅಕ್ಕಿ" ಸೇರಿಕೊಂಡಿದೆ. "ಅಕ್ಕಿ" ಯ ವಿಷಯಕ್ಕೆ ಸಂಬಂಧಿಸಿದಂತೆ ನಡೆದ ಪವಾಡ ಬೆಳಕಿನ ಬೀಜವೆಂದರೂ ತಪ್ಪಾಗಲಾರದು.

ಲಕ್ಕಮ್ಮ ದಂಪತಿಗಳು ಕಲ್ಯಾಣದಲ್ಲಿ ಶಿವಭಕ್ತರ ಮುಂದೆ ಬಿದ್ದ ಅಕ್ಕಿಯನ್ನು ಆಯ್ದು ತಂದು ದಾಸೋಹ ಮಾಡಿ ಜೀವಿಸುತ್ತಿದ್ದರು. ತೀರಾ ಬಡತನವಿದ್ದರೂ ಇವರು ಹೆಜ್ಜೆಗೆ

ಅಕ್ಕಿಯನ್ನು ಆಯ್ದುಕೊಳ್ಳುತ್ತಿರಲಿಲ್ಲ. ಒಂದು ದಿನದ ಊಟಕ್ಕೆ ಬೇಕಾದಷ್ಟು ಅಕ್ಕಿಯನ್ನು ಮಾತ್ರ ಆಯ್ದುಕೊಳ್ಳುತ್ತಿದ್ದರು. ಇವರ ಬಡತನದ ಅರಿವು ಬಸವಣ್ಣನಿಗೆ ತಿಳಿದು ಲಕ್ಕಮ್ಮ, ಮಾರಯ್ಯರವರು ಅಕ್ಕಿ ಆಯುವ ಜಾಗದಲ್ಲಿ ಅಕ್ಕಿಯನ್ನು ಚೆಲ್ಲಿಸುತ್ತಾರೆ. ಇದು ಲಕ್ಕಮ್ಮನಿಗೆ ತಿಳಿಯಿತು. ಬಸವಣ್ಣನ ಮಹಾಮನೆಯಲ್ಲಿರುವ ಎಲ್ಲಾ ಶರಣರನ್ನು ತಮ್ಮ ಮನೆಗೆ ಊಟಕ್ಕೆ ಬರುವಂತೆ ಗಂಡನಿಗೆ ಹೇಳಿ ಕಳುಹಿಸುತ್ತಾಳೆ. ಅಂದು ಆಯ್ದ ಅಕ್ಕಿಯಿಂದ ಬಗೆ ಬಗೆಯ ಭಕ್ಷ್ಯ ಭೋಜನವನ್ನು ಮಾಡಿ ದಾಸೋಹ ಮಾಡುತ್ತಾಳೆ. ಇದರಿಂದಾಗಿ ಲಕ್ಕಮ್ಮನ ದಿಟ್ಟತನವನ್ನು ನಾವು ಮನದಟ್ಟು ಮಾಡಿಕೊಳ್ಳಬಹುದು. ಬಸವಣ್ಣನ ಶ್ರೀಮಂತಿಕೆಗೆ ಸೊಪ್ಪು ಹಾಕದೆ ಅವಳು ಮಾಡಿದ ದಾಸೋಹ ಸೇವೆ ಗಮನ ಸೆಳೆಯುವಂತಹುದು. ಈ ಪವಾಡದಿಂದ ಗಂಡನನ್ನು ಮೀರಿಸುವ ಪ್ರಜ್ಞಾವಂತಿಕೆ ಲಕ್ಕಮ್ಮನಲ್ಲಿರುವುದು ತಿಳಿದು ಬರುತ್ತದೆ.

ಆಯ್ದಕ್ಕಿ ದಂಪತಿಗಳ ಶಿವನು ಪರೀಕ್ಷಿಸಿದ ಸಂದರ್ಭ – "ಲಕ್ಕಮ್ಮ ದಾಸೋಹಕ್ಕೆ ಅಣಿಮಾಡುತ್ತಿದ್ದಾಗ ಒಮ್ಮೆ ಶಿವನು ಮುದುಕನ ವೇಷದಲ್ಲಿ ಗಡಗಡ ನಡುಗುತ್ತಾ ಬಂದನು. ಅವನಿಗೆ ಹೊದೆಯುವದಕ್ಕೆ ಕೊಡಲು ಬೇರೆ ವಸ್ತ್ರವಿಲ್ಲವಾಗಿ ಲಕ್ಕಮ್ಮ ತನ್ನ ಸೀರೆಯಲ್ಲಿ ಅರ್ಧ ಹರಿದು ಅವನಿಗೆ ಹೊದಿಸಿದಳು. ಆತನ ಚಳಿ ಕಡಿಮೆಯಾಗಲಿಲ್ಲ. ಲಕ್ಕಮ್ಮ ಉಳಿದರ್ಧವನ್ನೂ ಅವನಿಗೆ ಹೊದಿಸಿ ಬರಿದಾಗಿ ಕತ್ತಲಲ್ಲಿ ನಿಂತಳು. ಆ ವೇಳೆಗೆ ಮಾರಯ್ಯ ಬಂದು ಪರಿಸ್ಥಿತಿಯನ್ನು ಅರಿತು ತಾನು ಉಟ್ಟಿದನ್ನೂ ಆತನಿಗೆ ಹೊದಿಸಿ ನಗ್ನವಾಗಿ ನಿಂತನು. ದಂಪತಿಗಳಿಬ್ಬರೂ ನಿರ್ವಾಣ ಸ್ಥಿತಿಯಲ್ಲಿರುವುದನ್ನು ಕಂಡು ಶಿವನು ಅವರ ದಾನಗುಣವನ್ನು, ಪರಮವಿರಾಗದ ನಿಲವನ್ನು ಕಂಡು ಮೆಚ್ಚಿ ಕೈಲಾಸಕ್ಕೆ ಕರೆದೊಯ್ದನು ಎಂಬ ಕಥೆ ಕಾವ್ಯಗಳಲ್ಲಿ ಬಂದಿದೆ" [೧]

ಇಲ್ಲಿ ಆಯ್ದಕ್ಕಿ ಲಕ್ಕಮ್ಮ ಹಾಗೂ ಆಯ್ದಕ್ಕಿ ಮಾರಯ್ಯನ ಮುಕ್ತ ಭಕ್ತಿಯನ್ನು ಕಾಣಬಹುದಾಗಿದೆ. ಅಂದರೆ ಲಕ್ಕಮ್ಮ ದಂಪತಿಗಳು ಮನೆಗೆ ಬಂದ ಅತಿಥಿಯನ್ನು ಸತ್ಕರಿಸುವ ಭಕ್ತಿ ವ್ಯಕ್ತವಾಗಿರುವುದು ಕಂಡು ಬಂದಿದೆ. ಕಾಯಕ ನಿಷ್ಠೆ ಬಗ್ಗೆ ಇವರು ಮಾದರಿಯಾಗಿದ್ದಾರೆ. ಕಾಯಕ ನಿಷ್ಠೆಯ ಬಗ್ಗೆ ಜಿಜ್ಞಾಸೆಯಲ್ಲಿರುವಾಗ ಬಸವಣ್ಣ ಅಲ್ಲಮ ಪ್ರಭುಗಳಾದಿಯಾಗಿ ಎಲ್ಲರಿಗೂ ಕಾಯಕದ ಮಹತ್ವವನ್ನು ಅರಿವು ಮಾಡಿಕೊಟ್ಟವಳು ಲಕ್ಕಮ್ಮ. ಹೀಗೆ ಕಾಯಕದ ವಿಷಯ ಬಂದಾಗ ಮೊದಲು ಬರುವ ಶಿವಶರಣೆಯರ ಹೆಸರೇ ಲಕ್ಕಮ್ಮನದು ಎಂದರೆ ತಪ್ಪಾಗಲಾರದು. ಕಾಯಕದ ವಿಷಯ ಮಹತ್ವವನ್ನು ಅನ್ಯರ ಜೊತೆಗೆ ತನ್ನ ಪತಿ ಮಾರಯ್ಯನಿಗೆ ಮನವರಿಕೆ ಮಾಡಿಕೊಡುತ್ತಾಳೆ.

ಮಾನವ ಜನಾಂಗದ ಬಡತನ, ಸಿರಿತನದ ಬಗ್ಗೆ ಲಕ್ಕಮ್ಮನ ವಚನಗಳು ಅನುಭಾವದಿಂದ ಕೂಡಿದ್ದು ಯೋಚನೆಗೆ ಎಡೆ ಮಾಡಿಕೊಡುವಂತಿವೆ. ಲಕ್ಕಮ್ಮ ಪರಮೇಶ್ವರನು ಸತ್ತಂದು ಭಕ್ತರಿಗೆ ಬಡತನವೆಂದು ನುಡಿಯುತ್ತಾಳೆ.

> "ಭಕ್ತಂಗೆ ಬಡತನವುಂಟೆ? ನಿತ್ಯಂಗೆ ಮರಣವುಂಟೆ?
> ಭಕ್ತರು ಬಡವರೆಂದು ಮತ್ತೊಂದು ಕೊಟ್ಟೆಯೆನೆಂದಡೆ
> ಮಾರಯ್ಯಪ್ರಿಯ ಅಮರೇಶ್ವರ ಲಿಂಗವು
> ಸತ್ತಂದಿಗಲ್ಲದೆ ಬಡತನವಿಲ್ಲ". [೨]

ಲಕ್ಕಮ್ಮನ ವಚನಗಳು ಸರಳವಾಗಿವೆ. ನೇರ ನಿರೂಪಣೆ ಇದೆ. ಮನಸ್ಸಿನ ಕದವನ್ನು ತೆರೆದು ಯೋಚಿಸುವಂತೆ ಮಾಡುತ್ತದೆ. 'ಕಾಯಕನಿಷ್ಠೆ'ಗೆ ತುಂಬಾ ಮಹತ್ವ ನೀಡಿವೆ. ಹೀಗಾಗಿ ಎಲ್ಲಾ ಕಾಲಕ್ಕೂ ಲಕ್ಕಮ್ಮನ ವಚನಗಳು ಮಹತ್ವವನ್ನು ಪಡೆದುಕೊಂಡಿವೆ.

"ಹೆಚ್ಚು ಅಕ್ಕಿಯನ್ನು ಸಂಗ್ರಹಿಸಿ ತಂದ ಮಾರಯ್ಯನನ್ನು ಕುರಿತು ಲಕ್ಕಮ್ಮ ಹೇಳುವ ಮಾತು" ತುಂಬಾ ಅರ್ಥಪೂರ್ಣವಾಗಿವೆ.

ಜಾಣೆಯೂ ಸುಶೀಲೆಯೂ ಗೃಹಿಣಿಯೂ ಆದ ಲಕ್ಕಮ್ಮ ಗಂಡನ ಈ ಪರಿ ಆಸೆಯನ್ನು ಕಂಡು ಸಹಿಸದಾದಳು. ಅವಳು ಗಂಡನ ಮೇಲೆ ಸಿಟ್ಟನ್ನು ಮಾಡಿಕೊಂಡು "ನೀವು ಈ ಪಾಟಿ ಅಕ್ಕಿಯನ್ನು ಹೊತ್ತು ತಂದಿದ್ದೀರಲ್ಲ ಏನನ್ನಬೇಕು ನಿಮ್ಮ ಬುದ್ಧಿಗೆ? ನೀವು ಮಾಡಿದ್ದು ಸರಿಯೇ ವಿಚಾರ ಮಾಡಿನೋಡಿ. ಅಂದಂದಿನ ಕಾಯಕವನ್ನು ಅಂದಂದಿಗೆ ಉಪಯೋಗಿಸಬೇಕು. ನಾಳೆಗೆ ನಾಡಿದಿಗೆಂದು ಮಿಗಿಸಿಡಬಾರದು ಎಂದು ಹೇಳಿಲ್ಲವೇ? ನೀವು ತಂದ ಅಕ್ಕಿ ತಿಂಗಳಿಡೀ ಬರುತ್ತದೆ. ಎಳ್ಳಷ್ಟು ನನಗಿದು ಇಷ್ಟವಿಲ್ಲ. ಮೊದಲು ಇದನ್ನು ಹಿಂದಕ್ಕೆ ಸುರಿದು ಬನ್ನಿ ಎಂದು ಅವಳು

"ಆಸೆಯೆಂಬುದು ಅರಸಿಂಗಲ್ಲದೆ
ಶಿವಭಕ್ತರಿಗುಂಟೆ ಅಯ್ಯಾ?
ರೋಷವೆಂಬುದು ಯಮದೂತರಿಗಲ್ಲದೆ
ಅಜಾತರಿಗುಂಟೆ ಅಯ್ಯಾ?
ಈಸಕ್ಕಿ ಆಸೆ ನಿಮಗೇಕೆ? ಈಶ್ವರನೊಪ್ಪ
ಮಾರಯ್ಯಪ್ರಿಯ ಅಮರೇಶ್ವರಲಿಂಗಕೆ
ದೂರ ಮಾರಯ್ಯ".[೩]

ಈ ವಚನದಲ್ಲಿ ಲಕ್ಕಮ್ಮ ಹೇಳುವುದನ್ನು ಕೇಳುತ್ತಾ ಮೌನವಾಗಿ ಕುಳಿತು ಬಿಟ್ಟ ಮಾರಯ್ಯ. ಎಲ್ಲಿಂದ ಅವಳಿಗೆ ಇಷ್ಟೊಂದು ಸ್ಫೂರ್ತಿ ಬಂತು? ಎಲ್ಲಾ ಶಿವನ ಅನುಗ್ರಹ, ಆಸೆ ಎನ್ನುವುದು ಶಿವಭಕ್ತರಿಗಿರ ಕೂಡದು, ರೋಷ, ಕೋಪ ಎಂಬುದು ಯಮಧೂತರಿಗೆ ಇರುವ ಸಹಜಗುಣ ಅಜಾತರಿಗೆ ಅಲ್ಲ. ಇಷ್ಟೊಂದು ಅಕ್ಕಿಯ ಆಸೆ ನಿಮಗೇಕೆ. ಇಂತಹ ಆಸೆಯನ್ನು ಶಿವ ಒಪ್ಪವುದಿಲ್ಲ. ಹೆಚ್ಚು ಅಕ್ಕಿ ಸಂಗ್ರಹಿಸಿ ತಂದ ಮಾರಯ್ಯನಿಗೆ ಲಕ್ಕಮ್ಮ ಅಕ್ಕಿಯನ್ನು ತಂದಲ್ಲೇ ಹಾಕಿ ಬರುವಂತೆ ಹೇಳುತ್ತಾಳೆ.

ಇಷ್ಟೊಂದು ಅಕ್ಕಿಯನ್ನು ಹೊತ್ತು ಮನೆಗೆ ತಂದೆನಲ್ಲ ಎಂದು ಯೋಚಿಸುತ್ತಿರುವಾಗಲೇ ಮತ್ತೊಂದು ವಚನ ಲಕ್ಕಮ್ಮನ ಬಾಯಿಯಿಂದ ಹೊರಬಿತ್ತು.

"ಒಮ್ಮನವ ಮೀರಿ ಇಮ್ಮನದಲ್ಲಿ ತಂದಿರಿ.
ಇದು ನಿಮ್ಮ ಮನವೊ?
ಬಸವಣ್ಣನ ಅನುಮಾನವೋ?
ಈ ಮಾತು ಮಾರಯ್ಯ ಪ್ರಿಯ

ಅಮರೇಶ್ವರ ಲಿಂಗಕೆ ಸಲ್ಲದ ಬೋನ
ಅಲ್ಲಿಯೇ ಸುರಿದು ಬನ್ನಿ ಮಾರಯ್ಯ".[೪]

ಎನ್ನುತ್ತಾ ಎಲ್ಲಿಂದ ತಂದಿರೋ ಅಲ್ಲೇ ಸುರಿದು ಬನ್ನಿ ಎಂದು ಮತ್ತೆ ಕಳಿಸುತ್ತಾಳೆ.

"ಕಾಯಕ ಧರ್ಮವನ್ನು ಹಿಡಿದವರು ಯಾವುದೇ ಸಂದರ್ಭದಲ್ಲೂ ಅದನ್ನು ಬಿಡಕೂಡದು. ಹಗಲಿನ ಖರ್ಚು ಇರುಳಿನ ಖರ್ಚನ್ನು ಹೇಗೆ ನಿಭಾಯಿಸುವುದು ಎನ್ನುವ ಚಿಂತೆಯನ್ನು ಮಾಡಬಾರದು. ಇದೇಕೆ ನಿಮ್ಮ ಅರಿವಿಗೆ ಬರದೆ ಹೋಯಿತು. ವ್ಯರ್ಥವಾಯಿತೆ ನಾವು ಇಷ್ಟು ದಿನಗಳು ನಡೆಸಿಕೊಂಡು ಬಂದ ವ್ರತ ನಿಯಮಗಳು" – ಎಂದು ಅವಳು ದುಃಖಿಸ ತೊಡಗಿದಾಗ, ಮಾರಯ್ಯ ಎಚ್ಚತ್ತವನಂತೆ ಅಕ್ಕಿಯ ಗಂಟನ್ನು ಹಿಡಿದು ಹೊರಗೆ ಹೊರಟ. ಹೊರಡುವ ಮೊದಲು ಅವಳತ್ತ ತಿರುಗಿ "ಸಮಾಧಾನ ಮಾಡಿಕೋ ಲಕ್ಕ ಇನ್ನೆಂದಿಗೂ ಈ ರೀತಿ ಅಕ್ಕಿಯ ಹೊರೆಯನ್ನು ತರುವುದಿಲ್ಲ" ಎಂದನು.

ಆಗ ಲಕ್ಕಮ್ಮ "ತರಬೇಡಿ, ಶಿವಭಕ್ತರಿಗೆ ಎಂದೂ ಬಡತನ ಬರುವುದಿಲ್ಲ. ಅಂಗಕ್ಕೆ ಬಡತನ ಬರಬಾರದು. ಬಸವಣ್ಣನವರು ನಮ್ಮನ್ನು ಪರೀಕ್ಷಿಸಲೋಸುಗ ಅಕ್ಕಿಯನ್ನು ಚೆಲ್ಲಿರಬೇಕು. ಇಲ್ಲ ನಾವು ಮಾಡುವ ದಾಸೋಹ ಅವರಿಗೆ ತಿಳಿದಿರುವುದರಿಂದ ನಮಗಲ್ಲದೆ ದಾಸೋಹಕ್ಕೂ ಇರಲಿ ಎಂದು ಈ ರೀತಿ ಚೆಲ್ಲಿರಬಹುದು. ಹಿಂದಕ್ಕೆ ಸುರಿದು ನಮಗೆ ಇಂದಿನ ಊಟಕ್ಕೆ ಎಷ್ಟು ಬೇಕೋ ಅಷ್ಟನ್ನು ತನ್ನಿ" ಎಂದಳು. ಮಾರಯ್ಯ ಹೆಂಡತಿಯ ಮಾತನ್ನು ವಿರೋಧಿಸಲಿಲ್ಲ. ಅವಳು ಹೇಳುವುದರಲ್ಲಿ ಸತ್ಯಾಂಶವಿದೆ. ತಾನು ಮಾಡಿದ್ದು ಸರಿಯಲ್ಲ ಎನ್ನುವ ಜ್ಞಾನೋದಯ ಅವನಿಗೆ ಆಗಿದೆ. ಆದ್ದರಿಂದ ಬೇಗನೆ ಅಕ್ಕಿಯ ಗಂಟಿನ ಹೊರೆಯನ್ನು ಹೊತ್ತು ಹೊರನಡೆದ. ತಾನು ಎಲ್ಲಿ ತಂದನೋ ಅಲ್ಲಿ ಅಕ್ಕಿಯನ್ನು ಸುರಿದು ಅಂದಿನ ದಿನಕ್ಕೆ ಬೇಕಾದಷ್ಟು ಅಕ್ಕಿಯನ್ನು ಮಾತ್ರ ತನ್ನ ಜೋಳಿಗೆಗೆ ತುಂಬಿಕೊಂಡ. ಹುರುಳಿಲ್ಲದ ಬದುಕನ್ನು ನಡೆಸಲು ಅವನಿಗೂ ಏನು ಮನಸ್ಸಿಲ್ಲ. ಯಾವುದೋ ವಿಷಗಳಿಗೆಯಲ್ಲಿ ತೆಗೆದುಕೊಂಡ ತೀರ್ಮಾನಕ್ಕೆ ಸರಿಯಾದ ಛೀಮಾರಿಯನ್ನೇ ಹಾಕಿದ್ದಾಳೆ ಲಕ್ಕಮ್ಮ. ತಾವು ರಾಯಚೂರಿನಲ್ಲಿ ನಡೆಸಿದ ಜೀವನದ ನೆನಪಾಯಿತು. ಬಿಸಿಲು ಮಳೆಯೆನ್ನದೆ ದುಡಿಯುತ್ತಿದ್ದ ನೆನಪು ಬಂತು. ಹೊಟ್ಟೆಗೆ ಬಟ್ಟೆಗೆ ಆಗುವಷ್ಟನ್ನು ಇಟ್ಟುಕೊಂಡು ಉಳಿದುದನ್ನು ದಾನ ಧರ್ಮಕ್ಕಾಗಿ ಖರ್ಚುಮಾಡುತ್ತಿದ್ದ ಪ್ರವೃತ್ತಿ ಕಲ್ಯಾಣಕ್ಕೆ ಬಂದ ಮೇಲೂ ಮುಂದುವರೆದುಕೊಂಡು ಬಂದಿತ್ತು.

ಹೀಗೆ ಕಾಯಕಕ್ಕೆ ಹೊಸ ಭಾಷ್ಯ ಬರೆದವಳು ಆಯ್ದಕ್ಕಿ ಲಕ್ಕಮ್ಮಳಾಗಿದ್ದಾಳೆ. ಕಾಯಕ ಅನುಷ್ಠಾನ ಮಾಡುವವರಿಗೆ ಅವಳ ಆದರ್ಶ ಶ್ರೀರಕ್ಷೆಯಾಗಿದೆ. ಮಾರಯ್ಯ ಅಂದಿನ ಅಡಿಗೆಗೆ ಆಗುವಷ್ಟು ಅಕ್ಕಿಯನ್ನು ಮಾತ್ರ ಹೊತ್ತುಕೊಂಡು ಮನೆಗೆ ಬಂದ. ಮಹಾಮನೆಯಿಂದ ಆಗ ತಾನೆ ಬಂದಿದ್ದ ಲಕ್ಕಮ್ಮನಿಗೆ ಅಕ್ಕಿಯನ್ನು ನೋಡಿ ಸಂತೋಷವಾಯಿತು.

"ಸರಿ ತಂದ ಅಕ್ಕಿಯನ್ನಿಲ್ಲಿ ಕೊಡಿ. ನಾನು ಅಡಿಗೆ ತಯಾರು ಮಾಡುವ ಹೊತ್ತಿಗೆ ಊಟಕ್ಕಿಬ್ಬರನ್ನು ಕರೆ ತನ್ನಿ" ಎಂದು ಹೇಳಿ ಲಕ್ಕಮ್ಮ ತನ್ನ ಕೆಲಸಕ್ಕೆ ನಡೆಯುತ್ತಾಳೆ. ಎಂದಿನ ವಿಧಿಯಂತೆ ಊಟ ಮುಗಿಸಿ ಎದ್ದು ಹೋದವರಲ್ಲಿ ಒಬ್ಬರು ಶರಣೆ

ವಿಮಳಾದೇವಿಯವರ ಕುರಿತು ಮಾತನಾಡಿಕೊಳ್ಳುತ್ತಾರೆ. ಆ ತಾಯಿ ಮಹಾಮಹಿಮಳು ಎನ್ನುವುದನ್ನು ಕೇಳಿಸಿಕೊಂಡ ಲಕ್ಕಮ್ಮನಿಗೆ ಆಕೆಯನ್ನು ನೋಡಬೇಕೆಂದು ಆಸೆಯಾಗುತ್ತದೆ. ಮಾತಿನ ನಡುವೆ ಪ್ರಸ್ತಾಪವೆತ್ತಿದಾಗ ಅವರನೆನ್ನುತ್ತಾರೆ.

"ಲಕ್ಕಮ್ಮ ನೀವು ಆಕೆಯ ಮನೆಯ ದವಸ ಧಾನ್ಯವನ್ನು ಒಪ್ಪಮಾಡಿಕೊಡಲು ಒಪ್ಪುವುದಾದರೆ ನಾನು ಈ ಸಂಜೆಯೇ ನಿಮ್ಮ ಬಗ್ಗೆ ಹೇಳುತ್ತೇನೆ."ಎಂದರು.

ಲಕ್ಕಮ್ಮನಿಗೆ ಕೆಲಸದ ಅಗತ್ಯವಿರಲಿಲ್ಲ. ಮಹಾಮಹಿಮರಾದ ವಿಮಳಾದೇವಿಯವರನ್ನು ನೋಡುವುದು ಅವಳ ಮುಖ್ಯ ಉದ್ದೇಶವಾಗಿತ್ತು. ಅದಕ್ಕಾಗಿ ಅವಳು ಕೂಡಲೇ ಒಪ್ಪಿಕೊಂಡಳು. ವಿಮಳಾದೇವಿಯವರ ಮನೆಗೆ ಹೋಗುತ್ತಿದ್ದ ಹಾಗೆ ಲಕ್ಕಮ್ಮನಿಗೆ ಅವರ ಮೇಲೆ ಅಪಾರವಾದ ಭಕ್ತಿ ಅಂಕುರಿಸಿತು. ವಿಮಳಾದೇವಿಯವರು ಜನರಿಗೆ ಕೊಡುವ ಉಪದೇಶಾಮೃತ ಅವಳ ಮನಸ್ಸನ್ನು ಸೂರೆಗೊಂಡಿತ್ತು. ಇದಲ್ಲದೆ ಲಕ್ಕಮ್ಮ ವಿಭೂತಿಯನ್ನು ಧರಿಸಿ ಪ್ರತಿನಿತ್ಯವೂ ಅಮರೇಶ್ವರನ ಸನ್ನಿಧಿಗೆ ಹೋಗಿ ಬರುವುದನ್ನು ಅವಳಲ್ಲಿದ್ದ ಭಕ್ತಿಯನ್ನು ಕಂಡವರು ವಿಮಳಾದೇವಿ. ಅವರಿಗೂ ಲಕ್ಕಮ್ಮನನ್ನು ಕಂಡರೆ ಪ್ರೀತಿ, ನಿತ್ಯವೂ ನಿಯಮವನ್ನು ತಪ್ಪದ ಲಕ್ಕಮ್ಮ ಅವರಿಗೆ ತುಂಬ ಹತ್ತಿರವಾದಳು. ವಿಮಳಾದೇವಿ ಅನೇಕರಿಗೆ ಶಿವದೀಕ್ಷೆ ಕೊಡುವುದನ್ನು, ಧರ್ಮಬೋಧನೆ ಮಾಡುವುದನ್ನು ನೋಡುತ್ತಾ ಬರುತ್ತಿದ್ದ ಲಕ್ಕಮ್ಮನಿಗೆ ಅಲ್ಲಿಗೆ ಬರುವ ಶರಣ-ಶರಣೆಯರನ್ನು ನೋಡಿದಾಗ ತನಗೂ ಅವರಂತೆ ತಾನೂ ಸಹ ಲಿಂಗಧಾರಣೆ ಮಾಡಿಕೊಂಡು ಅನುಭವ ಮಂಟಪಕ್ಕೆ ಹೋಗಿ ಕೂಡಬೇಕು. ಅಲ್ಲಿಗೆ ಬರುವ ಅಸಂಖ್ಯಾತ ಶಿವಶರಣೆ-ಶಿವಶರಣನ್ನು ನೋಡುತ್ತಾ, ಅವರ ಹಿತವಚನವನ್ನು ಕೇಳುತ್ತಾ ಬದುಕನ್ನು ಸಾರ್ಥಕಪಡಿಸಿಕೊಳ್ಳಬೇಕೆಂಬ ಮಹದಾಸೆ ಹುಟ್ಟಿಕೊಂಡಿತು. ಆದ್ದರಿಂದ ಒಂದು ದಿನ ವಿಮಳಾದೇವಿಯವರು ಒಬ್ಬರೇ ಇದ್ದ ಸಂದರ್ಭವನ್ನು ನೋಡಿ ಕೇಳಿದಳು.

ತಾಯಿ ತಾವು ಪ್ರತಿದಿನವೂ ಬಸವಣ್ಣನವರ ಅನುಭವ ಗೋಷ್ಠಿಯಲ್ಲಿ ಹೋಗಿ ಕುಳಿತುಕೊಳ್ಳುತ್ತೀರಿ. ಅದರಲ್ಲಿ ಸ್ವತಃ ಭಾಗವಹಿಸುವ ಪುಣ್ಯ ನಿಮಗಿದೆ. ಅದು ಹೇಗೆ ನಡೆಯುತ್ತದೆ ಎನ್ನುವ ಆಸೆ ನನಗೆ. ಅದನ್ನು ನೋಡಬೇಕು. ಅದಕ್ಕೇನಾದರೂ ನಿಯಮವಿದೆಯೇ? ಎಂದು ಕೇಳಿದಳು.

ಅಲ್ಲಿಗೆ ಹೋಗಲು ಕೆಲವು ನಿಯಮಗಳಿವೆ. ಆ ನಿಯಮಗಳನ್ನು ಪಾಲಿಸದವರನ್ನು ಅನುಭವ ಮಂಟಪದೊಳಗೆ ಬಿಡುವುದಿಲ್ಲ. ಮೊದಲು ನೀನು ಲಿಂಗಧಾರಣೆ ಮಾಡಿಕೊಳ್ಳಬೇಕು. ಭವಿಯನ್ನು ಬಿಟ್ಟು ಭಕ್ತರಾಗಬೇಕು. ಹಾಗಿದ್ದರೆ ಮಾತ್ರ ನಿಮಗೆ ಅವಕಾಶ ಸಿಗುತ್ತದೆ. ನೀನು ಇದಕ್ಕೆ ಒಪ್ಪುವುದಾದರೆ ದೀಕ್ಷೆಯನ್ನು ನಾನೇ ಕೊಡುತ್ತೇನೆ ಎಂದು ವಿಮಳಾದೇವಿ ಅಂದಾಗ ಲಕ್ಕಮ್ಮನ ಖುಷಿ ಮೇರೆಮೀರಿತು.

ಆಗ ಲಕ್ಕಮ್ಮ ಆಗಲಿ ತಾಯಿ ನಾನು ಇಂದೇ ನನ್ನ ಗಂಡನ ಒಪ್ಪಿಗೆಯನ್ನು ಪಡೆದು, ದೀಕ್ಷೆಗೆ ಅವರನ್ನೂ ಸಹ ಒಪ್ಪಿಸಿ ನಾಳೆ ಜೊತೆಯಲ್ಲಿ ಅವರನ್ನು ಕರೆದುಕೊಂಡು ಬರುತ್ತೇನೆ ಎಂದು ಹೇಳಿ ಮನೆಗೆ ಬೇಗನೆ ಹೊರಟಳು. ಮನೆಗೆ ಬಂದಾಗ ಅಕ್ಕಿ ಆಯಲು ಹೋಗಿದ್ದ ಮಾರಯ್ಯ ಇನ್ನೂ ಮನೆಗೆ ಬಂದಿರಲಿಲ್ಲ. ಶಿವನನ್ನು ಧ್ಯಾನಿಸುತ್ತಾ

ಮನೆಗೆಲಸದಲ್ಲಿ ಮಗ್ನಳಾದಳು ಲಕ್ಕಮ್ಮ. ಕೆಲಸ ಮಾಡುತ್ತಲೇ ಮಾರಯ್ಯನನ್ನು ಕುರಿತು ಯೋಚಿಸುತ್ತಿದ್ದಳು. ಹೊತ್ತು ಇಳಿಯುವದರೊಳಗೆ ಮಾರಯ್ಯ ಎಂದಿನಂತೆ ಮನೆಗೆ ಬಂದ. ಅವನ ಹೆಗಲಲ್ಲಿ ಜೋತಾಡುತ್ತಿದ್ದ ಜೋಳಿಗೆಯನ್ನು ಕೆಳಗಿಳಿಸುತ್ತಾ ಲಕ್ಕಮ್ಮ ಹೀಗೆ ಹೇಳಿದಳು.

ನೋಡಿ ವಿಮಳಾದೇವಿಯವರು ನಮ್ಮಿಬ್ಬರಿಗೆ ನಾಳೆ ದೀಕ್ಷೆ ಕೊಡಲಿದ್ದಾರೆ. ನಾಳೆಯಿಂದ ನಾವು ಲಿಂಗಧಾರಣೆ ಮಾಡಿ ನಿಯಮವನ್ನು ಇನ್ನಷ್ಟು ಬಿಗಿಗೊಳಿಸಬೇಕು ಎಂದಳು. ಲಕ್ಕಮ್ಮನನ್ನೇ ನೋಡುತ್ತಾ ಮಾರಯ್ಯ ಸಂಭ್ರಾತನಾದ. ಶಿವ ಪ್ರಭಾವ ಅವಳ ಮೇಲೆ ಎಷ್ಟು ಗಾಢವಾಗಿ ಆಗಿದೆ ತಾನೇ ಪುನೀತ ಎಂದುಕೊಂಡನು. ಹೀಗೆ ಲಿಂಗಧಾರಣೆಗೆ ಇಬ್ಬರೂ ತಯಾರಾದರು.

ಇಬ್ಬರೂ ನಸುಬೆಳಕಿನಲ್ಲೇ ಎದ್ದು ಸ್ನಾನ ಮುಗಿಸಿಕೊಂಡು ಹತ್ತಿರದಲ್ಲಿದ್ದ ದೇವಸ್ಥಾನಕ್ಕೆ ಹೋಗಿ ಅಮರೇಶ್ವರನಿಗೆ ಅಡ್ಡಬಿದ್ದು ನಮಸ್ಕರಿಸಿ ಬಂದರು. ಅಲ್ಲಿಂದ ಬಂದವರೇ ವಿಮಳಾದೇವಿಯವರ ಮನೆಗೆ ಹೊರಟರು. ಇವರು ಹೋಗುವ ಹೊತ್ತಿಗಾಗಲೇ ವಿಮಳಾದೇವಿಯವರು ಎದ್ದು ಲಿಂಗಪೂಜೆಯಲ್ಲಿ ನಿರತರಾಗಿದ್ದರು. ಸ್ವಲ್ಪ ಹೊತ್ತಿನಲ್ಲಿ ಪೂಜೆ ಮುಗಿಸಿದ ವಿಮಳಾದೇವಿಯವರು ಹೊರಗೆ ಬಂದು ದೇವರ ಕೋಣೆಗೆ ಕರೆದೊಯ್ದು ಲಿಂಗಧಾರಣೆ ಸಂಸ್ಕಾರ ಮಾಡಿಸಿದರು. ಅಂದಿನಿಂದ ಇಷ್ಟಲಿಂಗ ಪೂಜೆ ಮಾಡಿ ಮನೆಯಿಂದ ಇಬ್ಬರೂ ಹೊರಗೆ ಹೊರಡುತ್ತಿದ್ದರು.

ದೀಕ್ಷೆ ಕೊಡುವಾಗ ವಿಮಳಾದೇವಿ ಗುರುಕಾರುಣ್ಯ ಮಾಡಿ ದೀಕ್ಷೆ ಕೊಟ್ಟದ್ದರಿಂದ ಗುರುವಿನ ಅನುಗ್ರಹವೂ ದಂಪತಿಗಳಿಗೆ ಲಭಿಸಿತ್ತು. ತ್ರಿವಿಧ ದಾಸೋಹ ಮಾಡುತ್ತಿದ್ದ ಭಕ್ತರಿಬ್ಬರ ಮನದಲ್ಲಿ ಲವಲೇಶವೂ ಬೇಡದ ಹೊಲಸು ವಿಚಾರಗಳಿರಲಿಲ್ಲ. ಅದು ಸ್ಪಟಿಕದಷ್ಟು ಸ್ವಚಂದವಾಗಿತ್ತು. ಆಗಾಗ ಲಕ್ಕಮ್ಮ ದಂಪತಿಗಳು ತಮ್ಮ ಕಾಯಕದ ನಡುವೆ ಅನುಭವ ಮಂಟಪಕ್ಕೆ ಪ್ರವೇಶ ಪಡೆದುದ್ದರಿಂದ ಹೋಗಿ ಅಲ್ಲಿ ಕುಳಿತು ಗೋಷ್ಠಿಗಳನ್ನು ವೀಕ್ಷಿಸುತ್ತಿದ್ದರು. ಇದರಿಂದಾಗಿ ಇಬ್ಬರಲ್ಲೂ ಜ್ಞಾನ ವೃದ್ಧಿಸತೊಡಗಿತು.

ಲಕ್ಕಮ್ಮ ದಂಪತಿಗಳು ಬಂದು ಅನುಭವ ಮಂಟಪದಲ್ಲಿ ಕುಳಿತಾಗಲೆಲ್ಲ ಬಸವಣ್ಣನವರ ದೃಷ್ಟಿ ಅವರ ಮೇಲೆ ಬಿದ್ದಿದೆ. ಆದರೆ ಅವರ ಸನ್ನಿಧಿಯ ಅವಕಾಶ ಅವರಿಗಿನ್ನೂ ಸಿಕ್ಕಿರಲಿಲ್ಲ. ದೋರೆಗಾಯಿ ಮಾಗದೆ ಹಣ್ಣಾಗುವುದಿಲ್ಲ ಎನ್ನುವ ಪರಿಜ್ಞಾನವೂ ಅವರಲ್ಲಿತ್ತು. ಅದಕ್ಕಾಗಿ ಅವರೇನು ಹಪಹಪಿಸುತ್ತಿರಲಿಲ್ಲ. ಕಾಲ ಹೀಗೆ ಓಡುತ್ತಿತ್ತು ಕಾಲದ ಲಗಾಮವನ್ನು ಹಿಡಿದು ಬದುಕನ್ನು ಗೆಲ್ಲಬಲ್ಲರು. ಕಾಲದ ಲಗಾಮು ದಂಪತಿಗಳ ಕೈಯೊಳಗಿತ್ತೆಂದೇ ಅವರು ಸುಖಿಗಳಾಗಿದ್ದರು. ಆದರೆ ಅಂದು ಮಾರಯ್ಯ ಅಧಿಕ ಅಕ್ಕಿಯನ್ನು ತಂದು ಮರಳಿ ಹಿಂದಕ್ಕೆ ಸುರಿದು ಬಂದ ನೆನಪು ಅವಳನ್ನು ಯಾವಾಗಲೂ ಕಾಡುತ್ತಿತ್ತು. ಬಸವಣ್ಣನವರಿಗೆ ತಮ್ಮ ಕಾಯಕ ಸಿದ್ಧಾಂತದ ಬಗ್ಗೆ ಅನುಮಾನವಿದ್ದರೆ ಪ್ರತ್ಯಕ್ಷ ಬಂದು ನೋಡಲಿ ಎನ್ನುವ ಆಸೆಯೂ ಇತ್ತು. ಒಮ್ಮನದ ಒಪ್ಪಿಡಿಯ ಅಕ್ಕಿಯಲ್ಲಿ ಯಾವ ಪ್ರಸಾದ ಸಂಪತ್ತು ಅಡಗಿದೆ ಎನ್ನುವುದನ್ನು ಅವರು ಖುದ್ದಾಗಿ ಬಂದು ನೋಡಲಿ ಎನ್ನುವ ಆಸೆ ಇದ್ದುದರಿಂದ ಲಕ್ಕಮ್ಮ ಗಂಡನ ಮುಂದೆ ತನ್ನ ಆಸೆಯನ್ನು ವ್ಯಕ್ತಪಡಿಸುತ್ತಾಳೆ.

ಬಸವಣ್ಣ, ಚೆನ್ನಬಸವಣ್ಣ, ಪ್ರಭುದೇವರು ಮುಂತಾದ ಅಸಂಖ್ಯಾತ ಶಿವಶರಣರಿಗೆ ಲಕ್ಷದ ಮೇಲೆ ತೊಂಬತ್ತಾರು ಸಾವಿರ ಜಂಗಮ ದೇವರಿಗೆ ಬಿನ್ನಹ ಮಾಡಿ ಊಟಕ್ಕೆ ಕರೆದು ಕೊಂಡು ಬನ್ನಿ ಎಂದಾಗ ಮಾರಯ್ಯ ತಬ್ಬಿಬ್ಬಾದ. ಆಗ ಮಾರಯ್ಯ ಬೇಡ ಲಕ್ಕ ಮಾರಯ್ಯನ ಕಾಯಕ ನಿಷ್ಠೆ ಸಂಕಲ್ಪಗಳು ತಲೆಕೆಳಗಾಗುವುದು ಬೇಡ. ನಾವು ಅಷ್ಟೊಂದು ಸಂಖ್ಯೆ ಮಹಾಗಣಗಳಿಗೆ ತೃಪ್ತಿಯಾಗಿ ಬಡಿಸಲು ಅಶಕ್ತರು. ಈ ವಿಚಾರ ಬಿಟ್ಟುಬಿಡು ಎಂದರೆ ಲಕ್ಕಮ್ಮ ಕೇಳಲಿಲ್ಲ. ಲಕ್ಕಮ್ಮಳದು ಸಂದೇಹವನ್ನು ಮೀರಿದ ನಿಲುವು. ಸತ್ಯಶುದ್ಧ ಕಾಯಕದಲ್ಲಿ ಬೇಡಿದ್ದು ದೊರಕುತ್ತದೆಂಬ ನಂಬಿಕೆ. ಅವಳು ಗಂಡನಲ್ಲಿ ಈ ರೀತಿ ಅರಿಕೆ ಮಾಡುತ್ತಾಳೆ

> "ಮನ ಶುದ್ಧವಿಲ್ಲದಂಗೆ ದ್ರವ್ಯದ ಬಡತನವಿಲ್ಲ;
> ಚಿತ್ತ ಶುದ್ಧದಲ್ಲಿ ಕಾಯಕವ ಮಾಡುವಲ್ಲಿ
> ಸದ್ಭಕ್ತಂಗೆ ಎತ್ತನೋಡಿದತ್ತ ಲಕ್ಷ್ಮಿ ತಾನಾಗಿಪ್ಪಳು,
> ಮಾರಯ್ಯಪ್ರಿಯ ಅಮರೇಶ್ವರಲಿಂಗದ ಸೇವೆಯುಳ್ಳನ್ನಕ್ಕ".[೬]

ಲಕ್ಕಮ್ಮ ಈ ರೀತಿ ಹೇಳಿದಾಗ ಸುಮ್ಮನೆ ಕುಳಿತುಕೊಳ್ಳದೆ ಮಾರಯ್ಯ ಬಸವಣ್ಣ ಮುಂತಾದ ಪ್ರಥಮರಿಗೆ ಹೇಳಿಬರಲು ಹೊರಟ. ಅವನಿಗೆ ಹೆಂಡತಿಯ ಮಾತಿನಲ್ಲಿ ವಿಶ್ವಾಸವಿದೆ. ಅವಳ ಅಂತರಂಗವನ್ನರಿತು ಬೆಲೆಕೊಡಬಲ್ಲಂತವನು. ಅವಳು ಅಷ್ಟೆಂದದ್ದೇ ತಡ ಬಸವಣ್ಣನವರ ಅರಮನೆಗೆ ಬಂದು ಅವರನ್ನು ಉಳಿದ ಪ್ರಮಥರನ್ನು ಊಟಕ್ಕೆ ಕರೆದ.

ಮಾರಯ್ಯನ ಆಮಂತ್ರಣಕ್ಕೆ ಒಂದು ಕ್ಷಣ ಮೌನ ತಾಳುತ್ತಾರೆ ಬಸವಣ್ಣನವರು. ಶರಣರು ಮಹಿಮೆ ತಿಳಿಯುವುದಿಲ್ಲ. ಯಾವ ಹುತ್ತದಲ್ಲಿ ಯಾವ ಹಾವಿರುವುದೋ ಎಂದು ಕೊಂಡು ಮಾರಯ್ಯನ ಮಾತಿಗೆ ಒಪ್ಪಿ ಅಸಂಖ್ಯಾತ ಗಣಾದಿಗಳನ್ನು ಕೂಡಿಕೊಂಡು ಅವನ ಮನೆಗೆ ಹೊರಟರು. ಲಕ್ಕಮ್ಮನ ಮನೆ ಅತಿ ಬಡತನದ ರೇಖೆಯಲ್ಲಿರುವ ಮನೆ. ಆದರೆ ಒಳಗೆ ಅಡಿಯಿಡುತ್ತಿದ್ದಂತೆ ಅವರಿಗೆಲ್ಲ ಅಮರೇಶ್ವರಲಿಂಗದ ಮಹಾಮನೆ ಎನಿಸಿಬಿಡುತ್ತದೆ. ಸತ್ಯ ಶುದ್ಧ ಕಾಯಕದಲ್ಲಿ ಎತ್ತ ನೋಡಿದಡತ್ತ ಲಕ್ಷ್ಮಿ ತಾಂಡವವಾಡುತ್ತಿರುವುದನ್ನು ನೋಡಿದರು. ಸದ್ಭಕ್ತರ ಸಹಜ ಸಂಪತ್ತಿನ ಘನತೆ ಏನೆಂದು ತಿಳಿಯುತ್ತದೆ. ದಂಪತಿಗಳ ಮನದಲ್ಲಿ ಸಂಕಲ್ಪ ವಿಕಲ್ಪವಿಲ್ಲದ ಮನಸ್ಸನ್ನು ನೋಡಿದರು ಬಸವಣ್ಣನವರು. ಆ ದಂಪತಿಗಳಲ್ಲಿದ್ದ ಕಾಯಕ ನಿಷ್ಠೆ ಅರಿವಾದ ಮೇಲೆ "ಕೂಡಲ ಸಂಗಮದೇವರ ಸಾಕ್ಷಿಯಾಗಿ, ಆಯ್ದಕ್ಕಿಯ ಮಾರಯ್ಯ ಆಯ್ದಕ್ಕಿ ಲಕ್ಕಮ್ಮನ ಮನೆಯ ಮಗ ನಾನು" ಎಂದು ಶರಣರ ಶಿಶುವಾಗಿ ತನ್ನ ಅಪರಾಧವನ್ನು ಕ್ಷಮಿಸುವಂತೆ ಶಿವನಲ್ಲಿ ಮೊರೆಯಿಡುತ್ತಾರೆ. ಹೀಗೆ ಲಕ್ಕಮ್ಮನ ಮನೆಯಲ್ಲಿ ಬಸವಾದಿ ಪ್ರಮಥರಲ್ಲದೆ ಲಕ್ಷದ ಮೇಲೆ ಬಂದಿದ್ದ ತೊಂಬತ್ತಾರು ಸಾವಿರ ಶರಣರು ತೃಪ್ತಿಯಾಗಿ ಉಂಡು ಎದ್ದು ಹೋಗುವ ಮೊದಲು ಮಾರಯ್ಯ ಲಕ್ಕಮ್ಮರನ್ನು ಮನತುಂಬಿ ಹರಸಿದರು.

ಪ್ರಸ್ತುತ ಈ ಕೆಳಗಿನ ಪದ್ಯದಲ್ಲಿ ಡಾಂಭಿಕ ಭಕ್ತಿಯನ್ನು ವಿಮರ್ಶಿಸಿ, ವಿಡಂಬಿಸಿದ್ದಾಳೆ.

"ಗರ್ವದಿಂದ ಮಾಡುವ ಭಕ್ತಿ ದ್ರವ್ಯದ ಕೇಡು;
ನಡೆಯಿಲ್ಲದ ನುಡಿ ಅರಿವಿಂಗೆ ಹಾನಿ;
ಕೊಡದೆ ತ್ಯಾಗಿ ಎನಿಸಿಕೊಂಬುದು ಮುಡಿಯಿಲ್ಲದ ಶೃಂಗಾರ;
ದೃಢವಿಲ್ಲದ ಭಕ್ತಿ ಅಡಿ ಒಡೆದ ಕುಂಭದಲ್ಲಿ ಸುಜಲವ ತುಂಬಿದಂತೆ
ಮಾರಯ್ಯಪ್ರಿಯ ಅಮರೇಶ್ವರಲಿಂಗವ ಮುಟ್ಟದ ಭಕ್ತಿ"[೭]

ಕಾಯಕ ಯೋಗಿನಿ ಎನಿಸಿದ್ದ ಪ್ರಸಿದ್ಧ ವಚನಕಾರ್ತಿಯಾದ ಆಯ್ದಕ್ಕಿ ಲಕ್ಕಮ್ಮ ಪ್ರಸ್ತುತ ಈ ವಚನದಲ್ಲಿ ಗರ್ವದಿಂದ ಮಾಡುವ ಭಕ್ತಿಯನ್ನು ವಿಡಂಬನೆ ಮಾಡಿದ್ದಾಳೆ. ಭಕ್ತಿ ಎಂದಿಗೂ ನಿರಹಂಕಾರವಾದುದಾಗಿರಬೇಕು. ಆದರೆ ಅಹಂಕಾರದಿಂದ ಮಾಡುವ ಭಕ್ತಿಯಿಂದ ಹಣ ನಷ್ಟವಾಗುತ್ತದಯೇ ಹೊರತು ಇನ್ನಾವ ಉಪಯೋಗವಿಲ್ಲವೆಂದು ಲಕ್ಕಮ್ಮ ಅಭಿಪ್ರಾಯ ಪಡುತ್ತಾಳೆ. ಕೆಲವರು ಹಣವಿದೆಯೆಂದು ವೈಭವದ ವ್ರತಾಚರಣೆ ಮಾಡಿಸುವುದು, ಹಣವನ್ನು ನೀರಿನಂತೆ ಚೆಲ್ಲಿ ತಾವೆಂತಹ ದೈವಭಕ್ತರೆಂಬುದನ್ನು ಪ್ರಚುರ ಪಡಿಸಲು ಎಲ್ಲರೆದುರಿಗೂ ತಮ್ಮ ಭಕ್ತಿ ಪ್ರದರ್ಶನ ಮಾಡುತ್ತಾರೆ. ಇದು ಹಣದ ಅಹಂಕಾರವೇ ಹೊರತು ಭಕ್ತಿಯಲ್ಲ. ಇಂತಹ ಪೂಜಾವಿಧಿಗಳಿಂದ ಹಣ ನಷ್ಟವಾಗುತ್ತದೆಯೇ ಹೊರತು ದೇವರನ್ನು ಮೆಚ್ಚಿಸಲಾಗದು. ಅಂತೆಯೇ ನುಡಿದಂತೆ ನಡೆಯದಿದ್ದರೆ ಜ್ಞಾನಕ್ಕೆ ಬೆಲೆಯಿಲ್ಲ. ನಮ್ಮ ಮಾತಿಗೆ ಬೆಲೆ ಸಿಗಬೇಕೆಂದದಾರೆ ನಾವು ನುಡಿದಂತೆ ನಡೆದು ತೋರಿಸಬೇಕು.

ಹೆಣ್ಣಿಗೆ ಕೇಶವೇ ಶೃಂಗಾರ. ಕೇಶವಿಲ್ಲದಿದ್ದರೆ ವಿಕಾರ ಅಂತೆಯೇ ದಾನ ಮಾಡುವವನು ತ್ಯಾಗಿ ಎನ್ನಿಸಿಕೊಳ್ಳುತ್ತಾನೆಯೇ ಹೊರತು ಇನ್ನೊಬ್ಬರಿಗೆ ಬಿಡಿಗಾಸು ಕೊಡದ ಜಿಪುಣ ತ್ಯಾಗಿ ಎನ್ನಿಸಿಕೊಳ್ಳುವುದಿಲ್ಲ. ಆದ್ದರಿಂದ ಜಿಪುಣನು ತ್ಯಾಗಿಯಾಗಬಯಸುವುದು ಮುಡಿಯಿಲ್ಲದ ಶೃಂಗಾರದಂತೆ ಎಂಬುದು ಲಕ್ಕಮ್ಮನ ಅಭಿಪ್ರಾಯವಾಗಿರಬೇಕು. ಚಂಚಲ ಮನಸ್ಸಿನ ಭಕ್ತಿಯು ತೂತು ಮಡಿಕೆಯಲ್ಲಿ ತುಂಬಿದ ನೀರಿನಂತೆ. ಅದು ದಾರಿ ಮಧ್ಯದಲ್ಲೇ ಸೋರಿ ಹೋಗುತ್ತದಯೇ ಹೊರತು ದೇವರನ್ನು ತಲುಪದ ಭಕ್ತಿ ಎಂದು ಲಕ್ಕಮ್ಮ ಎಚ್ಚರಿಸಿದ್ದಾಳೆ.

ಅನುಭವ ಮಂಟಪದ ಶರಣಗೋಷ್ಠಿಗೆ ನಡೆದರು ಲಕ್ಕಮ್ಮ ದಂಪತಿಗಳು. ಮಹಾಮನೆಯ ಕಲ್ಯಾಣ ಮಂಟಪದಲ್ಲಿ ನಡೆಯುತ್ತಿದ್ದ ಉಪನ್ಯಾಸ ಗೋಷ್ಠಿಯಲ್ಲಿ ಭಾಗವಹಿಸುತ್ತಾ, ಸ್ವತಃ ತಾವು ಸಂವಾದ ಗೋಷ್ಠಿಗಳಲ್ಲಿ ಪಾಲ್ಗೊಳ್ಳುತ್ತಾ ನಿತ್ಯವಿಧಿಯಂತೆ ಅಕ್ಕಿ ಆಯುವ ಕಾಯಕದ ಜೊತೆಗೆ ನಿತ್ಯ ದಾಸೋಹ ನಡೆಸುವುದನ್ನು ಬಿಡದೆ ನಡೆಸಿಕೊಂಡು ಬರುತ್ತಿದ್ದರು. ಕಲ್ಯಾಣ ಮಂಟಪದಲ್ಲಿ ನಡೆಯುತ್ತಿದ್ದ ಉಪನ್ಯಾಸದಲ್ಲಿ ಭಾಗವಹಿಸುತ್ತಿದ್ದುದರಿಂದ ಅವರ ತಿಳಿವಳಿಕೆ ಜ್ಞಾನದ ಅರಿವು ದಿನದಿನಕ್ಕೂ ಹೆಚ್ಚುತಿತ್ತು. ಅವರು ಯಾವ ಶರಣರಿಗೂ ಕಡಿಮೆಯಿಲ್ಲದೆ ಅನೇಕ ವಚನಗಳ ಸೃಷ್ಟಿಗೆ ಕಾರಣಕರ್ತರಾದರು. ಲಕ್ಕಮ್ಮನ ವಚನಗಳು ಒಂದು ಕೈಮೇಲಾಗಿ ವಿಜೃಂಭಿಸುತ್ತಿತ್ತು.

"ಅಂಗಕ್ಕೆ ಬಡತನವಲ್ಲದೆ ಮನಕ್ಕೆ ಬಡತನವುಂಟೆ?" ಎಂಬ ನಿಶ್ಚಲ ನಿಲುವು; "ಆಸೆಯೆಂಬುದು ಅರಸಿಂಗಲ್ಲದೆ ಶಿವಭಕ್ತರಿಗುಂಟೆ?" ಎಂಬ ಅರಿವು. "ಕೂಟಕ್ಕೆ ಸತಿಪತಿ ಎಂಬ ನಾಮವಲ್ಲದೆ ಅರಿವಿಂಗೆ ಬೇರೊಂದೊಡಲುಂಟೆ?" ಎಂಬ ಸಮತಾಭಾವ, "ಒಮ್ಮನವ ಮೀರಿ ಇಮ್ಮನದಲ್ಲಿ ತಂದಿರಿ, ಇದು ನಿಮ್ಮ ಮನವೋ ಬಸವಣ್ಣನ ಅನುಮಾನ ಚಿತ್ತವೋ?" ಎಂದು ಬಸವಣ್ಣನ ಒಳ್ಳೆಯತನವನ್ನೇ ಪ್ರಶ್ನಿಸುವ ಕೆಚ್ಚು, "ಆಯ್ದಿಹೆನೆಂಬ ಕಾಯಕದ ಅರಿಕೆ ಹಿಂಗಿತೆ, ನಾ ಮಾಡಿಹೆನೆಂಬ ತವಕ ಹಿಂಗಿತೆ? ಎಂದು ಆಸೆಬುರುಕ ಗಂಡನನ್ನೇ ಝಂಕಿಸಿ ಕೇಳುವಂತಹ ರೋಷ" ಮಾರಯ್ಯಪ್ರಿಯ ಅಮರೇಶ್ವರಲಿಂಗವುಳ್ಳನ್ನಕ್ಕರ ನನಗಾರ ಹಂಗಿಲ್ಲ" ಎಂಬ ಆತ್ಮ ವಿಶ್ವಾಸ. ಇವು ಲಕ್ಕಮ್ಮನಲ್ಲಿ ಕಾಣುವ ಒಟ್ಟು ಅವಳ ವ್ಯಕ್ತಿತ್ವದ ಅಂಶಗಳು.

ಗಂಡ ಕಾಯಕ ಮರೆತು ಅನುಭಾವಗೋಷ್ಠಿಯಲ್ಲಿ ಮೈಮರೆತಾಗ ಕಾಯಕ ನಿಂದಿತ್ತು ಹೋಗಯ್ಯ ಎನ್ನಾಳ್ದನೆ" ಎಂದು ಎಚ್ಚರಿಸಿ ಸಮಯಪ್ರಜ್ಞೆಯನ್ನು ಮಿಡಿದುದು, ಹೆಚ್ಚಿಗೆ ಅಕ್ಕಿಯನ್ನು ಆಯ್ದು ತಂದಾಗ "ಒಮ್ಮನವ ಮೀರಿ ಇಮ್ಮನದಲ್ಲಿ ತಂದಿರಿ....ಅಲ್ಲಿಯೇ ಸುರಿದು ಬನ್ನಿ" ಎಂದು ಮರಳಿ ಕಳಿಸಿದುದು, ಮಾಡುವ ಭಕ್ತಿಯಲ್ಲಿ ಅಹಂಕಾರ ತೋರಿದಾಗ "ಗರ್ವದಿಂದ ಮಾಡುವ ಭಕ್ತಿ ದ್ರವ್ಯದ ಕೇಡು" ಎಂದು ವಿವೇಕ ತೋರಿದುದು, ಭಕ್ತಿಗೆ ಪ್ರತಿಫಲವನ್ನು ಅಪೇಕ್ಷಿಸಿದಾಗ "ಮಾಡಿ ನೀಡಿ ಹೋದೆಹೆನೆಂಬಾಗ ಕೈಲಾಸವೇನು ಕೈ ಕೂಲಿಯೇ?' ಎಂದು ನೀರಾಪೆಕ್ಷೆ ನಿಷ್ಕಾಮಭಕ್ತಿ ಅನುಸರಿಸಲು ತಿಳಿಸಿದುದು; "ನಿನ್ನ ವಿರಕ್ತಿ ನಷ್ಟವಾಗದ ಮುನ್ನ ಮಾರಯ್ಯಪ್ರಿಯ ಅಮರೇಶ್ವರಲಿಂಗವನರಿಯಿರಯ್ಯ" ಎಂದು ಅರಿವಿನ ಮಾರ್ಗ ಅನುಸರಿಸಲು ಬೋಧಿಸಿದುದು – ಇವೆಲ್ಲ ಲಕ್ಕಮ್ಮನ ಉನ್ನತವಾದ ಆಧ್ಯಾತ್ಮಿಕ ನಿಲವನ್ನು ನಿರ್ದೇಸುತ್ತವೆ. ಇಲ್ಲಿ ಲಕ್ಕಮ್ಮ ಶರಣರು ಕೊಟ್ಟ ಸ್ತ್ರೀ ಸ್ವಾತಂತ್ರ್ಯ ವೃಕ್ಷದ ಸತ್ಫಲವಾಗಿ ಕಂಡು ಬರುತ್ತಾಳೆ.

"ಆವ ಬೀಜ ಬೀಳುವಲ್ಲಿ ಮೊಳೆ ಮುಖ ಹಿಂಚುಮುಂಚುಂಟೆ?" ಮೂಲ ನಷ್ಟವಾದಲ್ಲಿ ಅಂಕುರ ನಿಂದಿತ್ತು" "ಕೈದ ಕೊಡುವರಲ್ಲದೆ ಕಲಿತನವ ಕೊಡುವರುಂಟೆ? ಹೆಣ್ಣ ಕೊಡುವರಲ್ಲದೆ ಕೂಟಕ್ಕೊಳಗಾದವರುಂಟೆ? ಕಳುವ ಚೋರಂಗೆ ಬಡವರೆಂದು ದಯವುಂಟೆ?" "ನಡೆಯಿಲ್ಲದ ನುಡಿ ಅರಿವಿಂಗೆ ಹಾನಿ; ಕೊಡದೆ ತ್ಯಾಗಿ ಎನಿಸಿಕೊಂಬುದು ಮುಡಿಯಲ್ಲದ ಶೃಂಗಾರ" "ಭಕ್ತಂಗೆ ಬಡತನವುಂಟೆ? ನಿತ್ಯಂಗೆ ಮರಣವುಂಟೆ?" "ಮನಶುದ್ಧವಿಲ್ಲದವಂಗೆ ದ್ರವ್ಯದ ಬಡತನವಲ್ಲದೆ, ಚಿತ್ತ ಶುದ್ಧದಲ್ಲಿ ಕಾಯಕವ ಮಾಡುವಲ್ಲಿ ಸದ್ಭಕ್ತಂಗೆ ಎತ್ತ ನೋಡಿದಡತ್ತ ಲಕ್ಷ್ಮಿ ತಾನಾಗಿಪ್ಪಳು" ಎಂಬಂತಹ ಸೂತ್ರ ಬದ್ಧವಾದ ಮಾತುಗಳು ವಚನಗಳ ಸೊಗಸನ್ನು ಹೆಚ್ಚಿಸಿವೆ. ಇವೆಲ್ಲವೂ ಆಯ್ದಕ್ಕಿ ಲಕ್ಕಮ್ಮನ ಭಾವ ಶ್ರೀಮಂತಿಕೆಯನ್ನು ಪ್ರಕಾಶಿಸಿವೆ.

# ಕೊನೆ ಟಿಪ್ಪಣಿ

೧. ಐವರು ಶಿವಶರಣೆಯರು, ಸಂಪಾದಕ ಡಾ. ಆರ್. ಶಿವಣ್ಣ. ಲೇಖಕರು ನೀಲಾವರ ಸುರೇಂದ್ರ ಅಡಿಗ, ಬಸವತತ್ವ ಪ್ರಚಾರ ಹಾಗೂ ಸಂಶೋದನಾ ಕೇಂದ್ರ ಪ್ರಕಾಶನ. ಬೆಂಗಳೂರು – ೨೦೧೧. ಪುಟ ೧೭,೧೮

೨. ಐವರು ಶಿವಶರಣೆಯರು, ಸಂಪಾದಕ ಡಾ. ಆರ್. ಶಿವಣ್ಣ. ಲೇಖಕರು ನೀಲಾವರ ಸುರೇಂದ್ರ ಅಡಿಗ, ಬಸವತತ್ವ ಪ್ರಚಾರ ಹಾಗೂ ಸಂಶೋದನಾ ಕೇಂದ್ರ ಪ್ರಕಾಶನ. ಬೆಂಗಳೂರು – ೨೦೧೧. ಪುಟ ೧೯

೩. ಆಯ್ದಕ್ಕಿ ಮಾರಯ್ಯ. ಸಂಪಾದಕರು: ಡಾ. ಬಿ. ಎಸ್. ಸ್ವಾಮಿ. ಲೇಖಕರು : ಪ್ರೇಮಾಭಟ್. ಬಸವತತ್ವ ಪ್ರಚಾರ ಹಾಗೂ ಸಂಶೋದನಾ ಕೇಂದ್ರ ಪ್ರಕಾಶನ. ಬೆಂಗಳೂರು – ೨೦೦೬. ಪುಟ ೧೭

೪. ಸಮಗ್ರ ವಚನ ಸಂಪುಟ – ೫. ಶಿವಶರಣೆಯರ ವಚನ ಸಂಪುಟ ಸಂಪಾದಕ ಡಾ. ವೀರಣ್ಣ ರಾಜೂರ, ಕರ್ನಾಟಕ ಸರ್ಕಾರ, ಕನ್ನಡ ಪುಸ್ತಕ ಪ್ರಾಧಿಕಾರ. ಬೆಂಗಳೂರು –೨೦೦೧ ಪುಟ ೨೨೦

೫. ಆಯ್ದಕ್ಕಿ ಮಾರಯ್ಯ. ಸಂಪಾದಕರು: ಡಾ. ಬಿ. ಎಸ್. ಸ್ವಾಮಿ. ಲೇಖಕರು : ಪ್ರೇಮಾಭಟ್. ಬಸವತತ್ವ ಪ್ರಚಾರ ಹಾಗೂ ಸಂಶೋದನಾ ಕೇಂದ್ರ ಪ್ರಕಾಶನ. ಬೆಂಗಳೂರು – ೨೦೦೬. ಪುಟ ೨೭

೬. ಆಯ್ದಕ್ಕಿ ಮಾರಯ್ಯ. ಸಂಪಾದಕರು: ಡಾ. ಬಿ. ಎಸ್. ಸ್ವಾಮಿ. ಲೇಖಕರು : ಪ್ರೇಮಾಭಟ್. ಬಸವತತ್ವ ಪ್ರಚಾರ ಹಾಗೂ ಸಂಶೋದನಾ ಕೇಂದ್ರ ಪ್ರಕಾಶನ. ಬೆಂಗಳೂರು – ೨೦೦೬. ಪುಟ ೩೪

೭. ಸಮಗ್ರ ವಚನ ಸಂಪುಟ – ೫. ಶಿವಶರಣೆಯರ ವಚನ ಸಂಪುಟ ಸಂಪಾದಕ ಡಾ. ವೀರಣ್ಣ ರಾಜೂರ, ಕರ್ನಾಟಕ ಸರ್ಕಾರ, ಕನ್ನಡ ಪುಸ್ತಕ ಪ್ರಾಧಿಕಾರ. ಬೆಂಗಳೂರು –೨೦೦೧ ಪುಟ ೨೨೧

## ೩: ಆ. ಮುಕ್ತಾಯಕ್ಕ

ವೀರಶೈವ ತತ್ವ ಕ್ಷೇತ್ರದಲ್ಲಿ ಸುವರ್ಣದ ಘಟ್ಟಿ ಮತ್ತು ಮೌಕ್ತಿಕದ ಅಚ್ಚು ಎಂದರೆ ಅಜಗಣ್ಣನ ತಂಗಿ ಮುಕ್ತಾಯಕ್ಕ.

ಮುಕ್ತಾಯಕ್ಕ ವಚನಕಾರ್ತಿಯರ ಸಮೂಹದಲ್ಲಿ ವಿಶಿಷ್ಟ ವ್ಯಕ್ತಿತ್ವ ಹೊಂದಿದವಳು. ಅನಭಾವಿಕ ಸಿದ್ಧಾಂತಗಳ ಆಳ ವಿಸ್ತಾರವನ್ನು ಅರಿತ ಮಹಾಜ್ಞಾನಿ ಆಕೆ. ಅರಿವು-ಆಚಾರ, ಸಾಕಾರ-ನಿರಾಕಾರಗಳ ಸಮನ್ವಯ ಸಾಮರಸ್ಯ ಸಿದ್ಧಿಗಳನ್ನು ಪ್ರತಿಪಾದಿಸುತ್ತಲೇ ತನ್ನೊಳಗೆ ಅವುಗಳನ್ನು ಸಾಕ್ಷಾತ್ಕರಿಸಿಕೊಂಡ ಮಹಾನ್ ಶಿವಾನುಭವ ಸಾಧಕಿ. ಅಲ್ಲಮ ಪ್ರಭುವಿನಂಥ ಅಪ್ರತಿಮ ಯೋಗಿ ಶರಣನೊಂದಿಗೆ ಚರ್ಚೆಗಿಳಿದು ಆತನ ವಿಚಾರ ಚಿಂತನಗಳನ್ನು ತನ್ನದೇ ಮಿತಿಯಲ್ಲಿ ವಿರೋಧಿಸುತ್ತ ತಾನು ನಂಬಿದ ತನ್ನಣ್ಣನ ಆಚರಣೆ ಅನುಭಾವ ಸಾಧನೆಗಳ ಜತೆ ಲೌಕಿಕ ಬದುಕಿನ ಸಾಕಾರನಿಷ್ಠೆ ಕ್ರಿಯಾಚರಣೆಗಳಿಗೆ ಮಹತ್ವ ಕೊಡುತ್ತ ಸಾಗಿದ ದಿಟ್ಟ ನಿಲುವಿನ ಸಾಧಕಿ. ಅನುಭಾವ ಸಾಧನೆಯ ಅಂಗನೆಯರ ಇತಿಹಾಸದಲ್ಲಿಯೇ ಈಕೆಯದು ಅಪೂರ್ವ ಅಪ್ರತಿಮ ವ್ಯಕ್ತಿತ್ವವಾಗಿದೆ. ಅಂತಯೇ ಮುಕ್ತಾಯಿಗೆ ಅಜಗಣ್ಣನು ಗುರು ಹಾಗೆಂದು ಮುಕ್ತಾಯಿ ತನ್ನ ವಚನದಲ್ಲಿ ಹೇಳಿದ್ದಾಳೆ.

ಇವರ ಊರು ಲಕ್ಕುಂಡಿ. ಗದಗ ತಾಲೂಕಿನಲ್ಲಿದೆ. ಲಕ್ಕುಂಡಿ ವಾಸ್ತುಶಿಲ್ಪ, ಶಿಲಾಶಾಸನಗಳ ಊರು ಎಂದು ಹೆಸರಾಗಿದೆ. ಅಲ್ಲಿ ಬಹು ಪ್ರಾಚೀನವಾದ ಬಸ್ತಿಗಳು, ಜೈನ-ಶೈವ ಮಂದಿರಗಳು ವಿಪುಲವಾಗಿವೆ. ೧೨ನೆಯ ಶತಮಾನದಲ್ಲಿ ಅದು ಬಹಳಷ್ಟು ಉಚ್ಛ್ರಾಯ ಸ್ಥಿತಿಯಲ್ಲಿ ಇತ್ತೆಂದು ಕಂಡು ಬರುತ್ತದೆ. ಸಾಹಿತ್ಯ, ಕಲೆ, ಕುಶಲ ಕೈಗಾರಿಕೆಗಳಿಗೆ ಹೆಸರಾದ ಊರಾಗಿತ್ತು. ಜನರು ನೀತಿವಂತರು, ಪಾಪ ಭೀರುಗಳು ಆಗಿದ್ದರು. ಬಹುತೇಕ ಹಳ್ಳಿಗಳಿಗೆ ಇಲ್ಲದ ಸೌಕರ್ಯ ಈ ಹಳ್ಳಿಗೆ ಇದ್ದಿತು. ಅದೆಂದರೆ ಓದು ಬರಹಕ್ಕೆ ಅನುಕೂಲವಾಗಿರುವ ಮಠ, ಮಂದಿರ, ಪಾಠಶಾಲೆಗಳು, ಅಕ್ಷರಗಳನ್ನು ಹೇಳಿ ಕೊಡುವ ಪುರೋಹಿತರ ಅಯ್ಯನವರು ಅಲ್ಲಿ ವಾಸವಾಗಿದ್ದರು.

ಆ ಊರಲ್ಲಿ ವಾಸವಾಗಿದ್ದ ಅಣ್ಣ ತಂಗಿಗೆ ಇರುವದೊಂದು ಚಿಕ್ಕ ಮನೆ, ಚಿಕ್ಕ ಬಾಗಿಲಿನ ಮನೆ. ಅವರ ಉಪಜೀವನಕ್ಕೆ ಬೇಕಾಗುವ ಒಂದು ಹೊಲ, ಫಲವತ್ತಾದ ಹೊಲ. ಮೈಮುರಿದು ದುಡಿದು ಕೃಷಿಮಾಡಿ, ಒಡ್ಡು ಕಟ್ಟೆಗಳನ್ನು ಕಟ್ಟಿ, ಭೂಮಿ ಸಮಗೊಳಿಸಿ, ಕಸಕಡ್ಡಿಗಳು ಇಲ್ಲದಂತೆ ಮುಳ್ಳು ಕಂಟಿಗಳು ಬೆಳೆಯದಂತೆ, ಹುಡಿ ಗೊಬ್ಬರಗಳನ್ನು ಹಾಕಿ ಸಮಯಕ್ಕೆ ಸರಿಯಾಗಿ ಬೇಸಾಯ ಕ್ರಮಗಳನ್ನು ಕೈಕೊಂಡು ಚೊಕ್ಕಟವಾಗಿಟ್ಟುಕೊಂಡ ಹೊಲ.

ಅಜಗಣ್ಣ ವಯಸ್ಸಿನಿಂದ ಚಿಕ್ಕವನಾದರೂ ಬೇಸಾಯದಲ್ಲಿ ಅನುಭವಿಕ. ಸದಾ ಕಾಯಕದಲ್ಲಿ ನಿರತನಾದವನು. ಅಷ್ಟೇ ತನ್ನ ಮೇಲಿದ್ದ ಹೊಣೆಗಾರಿಕೆಯನ್ನು ಅರಿತುಕೊಂಡವನು. ತಂದೆ ತಾಯಿಗಳಿಲ್ಲದ, ಸಮೀಪದ ಬಂಧುಬಳಗವಿಲ್ಲದ ತನ್ನ

ಬದುಕಿನ ಇತಿಮಿತಿಗಳನ್ನು ತಿಳಿದುಕೊಂಡವ. ಅನಾಥೆಯಾದ ಚಿಕ್ಕ ತಂಗಿಯ ಯೋಗ ಕ್ಷೇಮವನ್ನು ನೋಡಿಕೊಳ್ಳಬೇಕು. ಆಕೆಯ ಶಿಕ್ಷಣ ಬೆಳವಣಿಗೆಯತ್ತ ಗಮನ ಕೊಡಬೇಕು. ಆಕೆಗೆ ತಂದೆ ತಾಯಿಯ ನೆನಪಾಗದಂತೆ ಮಾತೃ ವಾತ್ಸಲ್ಯದ ಹಾಲುಣಿಸಿ ಬೆಳೆಸಬೇಕು. ಅವಳದು ಮನೆಯ ಎಲ್ಲ ಕೆಲಸಗಳನ್ನು ನಿರ್ವಹಿಸಿಕೊಳ್ಳುವಷ್ಟು ವಯಸಲ್ಲ. ಆಕಳ ಹಿಂಡಲು ಇನ್ನೂ ಬರುವುದಿಲ್ಲ. ಅಡಿಗೆ, ಅಂಬಲಿ, ರೊಟ್ಟಿ ಮಾಡಲು ಈಗ ಕಲಿಯುತ್ತಿದ್ದಾಳೆ. ತಂಗಿಯನ್ನು ಒಳ್ಳೆ ಗೃಹಿಣಿಯಾಗಿ ಬೆಳಸಬೇಕು. ತಾಯಿ ಇದ್ದಿದ್ದರೆ ತನ್ನ ಒಬ್ಬಳೇ ಒಬ್ಬಳು ಮಗಳನ್ನು ಎಷ್ಟು ಅಕ್ಕರೆಯಿಂದ ನೋಡಿಕೊಳ್ಳಬೇಕೋ ಅಷ್ಟೇ ಅಕ್ಕರೆಯಿಂದ ತಂಗಿ ಮುಕ್ತಾಯಿಯನ್ನು ಅಜಗಣ್ಣ ನೋಡಿಕೊಳ್ಳುತ್ತಿದ್ದನು.

ಅಜಗಣ್ಣ ಮಿತಭಾಷಿ, ಮುಕ್ತಾಯಿ ಚಿಕಿತ್ಸಕ ಬುದ್ಧಿಯವಳು. ಅವನಿಗೆ ಏನಾದರೂ ಪ್ರಶ್ನೆ ಕೇಳುತ್ತಲೇ ಇರುತ್ತಿದ್ದಳು. ಮುಕ್ತಾಯಿ ತನ್ನ ವಯಸ್ಸಿನ ಬುದ್ಧಿಮಟ್ಟಕ್ಕೂ ಮೀರಿ ಪ್ರಬುದ್ಧ ಪ್ರಶ್ನೆಗಳನ್ನು ಅಣ್ಣನಿಗೆ ಹಾಕುತ್ತಿದ್ದಳು.

ಅಣ್ಣಾ! ನಮ್ಮೆಲ್ಲರ ತಂದೆ ದೇವರೆಂದು ಹೇಳುತ್ತೀಯಾ? ಹಾಗಾದರೆ ದೇವರ ತಂದೆ ಯಾರು? ಅವನ ಅವ್ವ ಅಪ್ಪನ ಹೆಸರು ಏನು? ದೇವರು ನಮ್ಮಲ್ಲಿಯೇ ಇರುವನೆಂದು ಹೇಳುವಿ. ಆದರೆ ಅವನು ನಮಗೆ ಏಕೆ ಕಾಣುವುದಿಲ್ಲ? ಗುಡಿ ಗುಂಡಾರಗಳಲ್ಲಿ ಏಕೆ ಕುಳಿತಿದ್ದಾನೆ?

ಇಂಥ ಹಲವಾರು ಪ್ರಶ್ನೆಗಳನ್ನು ಅವನಿಗೆ ಕೇಳುತ್ತಲೇ ಇರುತ್ತಿದ್ದಳು.

"ನೀನು ಬಸವ ಕಲ್ಯಾಣಕ್ಕೆ ಮೇಲಿಂದ ಮೇಲೆ ಹೋಗುತ್ತಿಯಲ್ಲ? ಅಲ್ಲಿ ಅಮ್ಮ ಅಪ್ಪ ಇದ್ದಾರೆಯೇ? ಅಲ್ಲಿ ಏನು ನಡೆಯುತ್ತದೆ? ಅಣ್ಣಾ! ನನಗೇಕೆ ಅಲ್ಲಿಗೆ ಕರೆದುಕೊಂಡು ಹೋಗುವುದಿಲ್ಲ? ನೀನು ತೋರಿಸಿ ಕೊಟ್ಟಂತೆ ನಾನೂ ಲಿಂಗಪೂಜೆ ಮಾಡುತ್ತೇನೆ. ನೀನು ಹೇಳಿಕೊಟ್ಟಿರುವಿಯಲ್ಲ ಆ ಮಂತ್ರವನ್ನೇ ನಾನೂ ಪಠಿಸುತ್ತೇನೆ".

ಹೀಗೆ ಅಣ್ಣನಿಗೆ ದುಂಬಾಲು ಬಿದ್ದು ಪ್ರಶ್ನಾವಳಿಯನ್ನು ಅವನ ಮುಂದೆ ಇಡುತ್ತಿದ್ದಳು. ತನಗೆ ಅನಿಸಿದುದನ್ನು ಮುಕ್ತ ಮನಸ್ಸಿನಿಂದ ಹೇಳುತ್ತಿದ್ದಳು. ಅಜಗಣ್ಣನು ನಗೆ ಮುಖದಿಂದ ಕೇಳುತ್ತಿದ್ದನು.

"ದೈವಿ ಜೀವನದತ್ತ ಒಲವಿರುವದು ಸುಕೃತ ತಂಗಿ! ಸುಕೃತವೆಂದರೆ ಈಶನ ಕರುಣೆ. ನಿನ್ನ ಹೆಸರಿಗೆ ತಕ್ಕಂತೆ ನೀನು ಮುಕ್ತಾಯಿ!"

ಅಜಗಣ್ಣನು ಮುಕ್ತಾಯಿಗೆ ಗುರುವಿನ ಸ್ಥಾನದಲ್ಲಿರುವುದರಿಂದ ಆಕೆಯ ಪ್ರಶ್ನೆಗಳಿಗೆ ಆಕೆಗೆ ತಿಳಿಯುವಂತೆ ಉತ್ತರಗಳನ್ನು ಹೇಳಲೇಬೇಕಾಗುತ್ತಿತ್ತು.

ಮುಕ್ತಾಯಿ ದೊಡ್ಡವಳಾದಳು. ಆಕೆ ಎಂಥ ಗಡಸು ವಿಚಾರಗಳನ್ನು ಸಹ ಅರ್ಥೈಸಿಕೊಳ್ಳುವಷ್ಟು ಪ್ರಬುದ್ಧಮತಿಯಾಗಿದ್ದಳು.

ಒಂದು ದಿನ ಅಣ್ಣನ ಬಳಿಗೆ ಬಂದು "ಅಣ್ಣಾ! ನಾಳೆ ಶಿವರಾತ್ರಿ. ಇಡೀ ದಿನವೆಲ್ಲ, ಇರುಳೆಲ್ಲ, ಶಿವಚಿಂತನೆಯಲ್ಲಿ, ವಚನಗಳ ಶ್ರವಣದಲ್ಲಿ, ತತ್ವ ವಿವೇಚನೆಯಲ್ಲಿ ಕಾಲ ಕಳೆಯಬೇಕಲ್ಲವೆ? ನೀನು ಇತ್ತಿತ್ತಲಾಗಿ ಮಾತನಾಡುವುದೇ ಇಲ್ಲ. ನೀನು ನಿನ್ನ ಶಿವಯೋಗಾನಂದದಲ್ಲಿಯೇ ಇರುತ್ತಿ. ನಾಳೆ ಶಿವರಾತ್ರಿ. ನಿನ್ನಿಂದ ಅನೇಕ ವಿಷಯಗಳನ್ನು ಮತ್ತೆ ಮತ್ತೆ ಕೇಳಬೇಕೆಂದೆನಿಸುತ್ತದೆ".

ಶಿವರಾತ್ರಿಯ ದಿವಸ ಉದಯವಾಯಿತು. ಸ್ನಾನ ಪೂಜಾದಿಗಳನ್ನು ಮುಗಿಸಿಕೊಂಡು ಅಣ್ಣ ತಂಗಿಯರಿಬ್ಬರೂ ಕುಳಿತರು.

"ಮುಕ್ತಾಯಿ! ನಿನಗೆ ಬೇಕಾದ ಪ್ರಶ್ನೆ ಕೇಳು. ನಾನು ಕಲ್ಯಾಣ ಶರಣರ ಸಹವಾಸದಲ್ಲಿ ಇದ್ದು ತಿಳಿದುಕೊಂಡ ವಿಷಯವನ್ನು ಹಾಗೂ ಸ್ವಾನುಭವಕ್ಕೆ ಬಂದ ಜ್ಞಾನವನ್ನು ನಿನ್ನ ಮುಂದಿಡುವುದು ಶರಣರ ಆಣತಿ ಎಂದು ಭಾವಿಸುವೆನು. ನೀನು ನನ್ನ ಬಳಿವಿಡಿದು ಬಂದವಳು."

"ಕಲ್ಯಾಣದಲ್ಲಿ ರೂಪಗೊಂಡ ಅನುಭವ ಮಂಟಪವೆಂದರೇನು? ಅದಕ್ಕೆ ಅನುಭವ ಮಂಟಪವೆಂದು ಏಕೆ ಕರೆಯುತ್ತಾರೆ?"

"ಚಿತ್ತಗೊಟ್ಟು ಕೇಳು. ಅದನ್ನು ಸ್ವಲ್ಪದರಲ್ಲಿ ಹೇಳಲು ಸಾಧ್ಯವಿಲ್ಲ. ಅದರ ರೂಪರೇಷೆಯನ್ನು ಮಾತ್ರ ವಿವರಿಸುವೆನು. ಅದು ಅಣ್ಣ ಬಸವಣ್ಣನವರ ಹೊಸ ವಿಚಾರ ಪ್ರಣಾಲಿಯ, ಕ್ರಾಂತಿಕಾರಕ ವಿಚಾರದಾಸೋಹದ ಹೊಸ ಧರ್ಮದ ಜೀವಾಳದಂತಿದೆ. ಭಾರತದ ನಾನಾ ಭಾಗದಿಂದ ಬಂದ ಮಹಂತರು, ಮಹಿಮರು, ಜ್ಞಾನಿಗಳು ಸ್ವಾನುಭವದ ಅಡಿಗೆಯನ್ನು ಮಾಡಿ, ಜನಕೋಟಿಗೆ ಉಣಬಡಿಸುವ ಮಹಾಮನೆ ಅನುಭವ ಮಂಟಪ. ಅನುಭವ ಮಂಟಪವು ಈ ಯುಗಧರ್ಮದ – ಕಾಲಪ್ರಜ್ಞೆಯ ಆಂತರಿಕ ಸಂವೇದನೆಗೆ ಬಾಯಿ ಒದಗಿಸಿ ಕೊಟ್ಟಿದೆ. ಅಂಧಶ್ರದ್ಧೆ, ಶೋಷಣೆ, ಜಾತಿಯತೆ, ಉಚ್ಚನೀಚವೆಂಬ ತಾರತಮ್ಯ, ನಿರುದ್ಯೋಗ, ಅಜ್ಞಾನ, ದಾರಿದ್ರ್ಯಗಳ ವಿರುದ್ಧ ಶಾಶ್ವತವಾದ ಪರಿಹಾರವನ್ನು ಕಂಡು ಹಿಡಿಯಲು ಸ್ಥಾಪನೆಗೊಂಡುದೇ ಅನುಭವ ಮಂಟಪ."

"ಅಂದರೆ ಅಲ್ಲಿ ದೇವರು, ಧರ್ಮ, ಜನರು, ನೀತಿ, ಜಗತ್ತು, ಯೋಗ, ಕಾಯಕ ಇತ್ಯಾದಿಗಳನ್ನು ಕುರಿತು ಆಲೋಚಿಸುವರಲ್ಲವೆ? ಇವೆಲ್ಲವನ್ನು ಅರ್ಥೈಸಿಕೊಳ್ಳಬೇಕಾದರೆ ಸಂಸ್ಕೃತವನ್ನು ಕಲಿಯಬೇಕಲ್ಲವೆ?"

"ಹಾಗೇನಿಲ್ಲ! ಸಂಸ್ಕೃತ ಗ್ರಂಥಗಳ ಅಭ್ಯಾಸ ಮಾಡಬೇಕೆಂಬ ಕಟ್ಟೇನಿಲ್ಲ. ಅದು ಐಚ್ಛಿಕವಾದುದು. ಅಲ್ಲಿ ಜೀವನದ ಸಮಗ್ರ ಸಮಸ್ಯೆಗಳನ್ನು ಕುರಿತು ಆಲೋಚನೆ ನಡೆಯುತ್ತದೆ. 'ನಡೆದಂತೆ ನುಡಿ, ನುಡಿದಂತೆ ನಡೆ; ಇದೇ ಜನ್ಮ ಕಡೆ' ಎಂಬುದೆ ಅದರ ಘೋಷಣೆ! ಅಂಗಕ್ರಿಯೆಗಳಾಗಿ ಮಾರ್ಪಾಡಾಗಬೇಕು – ಎಂಬ ಪರಿಪೂರ್ಣ ಯೋಗವನ್ನು ಕಲಿಸುತ್ತದೆ ಅನುಭವ ಮಂಟಪ."

ಹೀಗೆ ಅಣ್ಣ ತಂಗಿಯರ ಮನೆ ಅನುಭವ ಮಂಟಪದ ತಾಣವಾಯಿತು.

ಶರಣ ಧರ್ಮದ ಸಂಪ್ರದಾಯದಂತೆ ಮುಕ್ತಾಯಕ್ಕನ ಮದುವೆ ಮಾಡಿ ಕೊಡಬೇಕು. ಅದು ಅಣ್ಣನ ಹೊಣೆಯೂ ಹೌದು.

ಮೊಸಳಿಕಲ್ಲ ಗ್ರಾಮದ ಒಬ್ಬ ಸಾತ್ವಿಕ, ಸುವಿಚಾರಿ, ಕಾಯಕನಿಷ್ಠ ವರನನ್ನು ನೋಡಿಕೊಂಡು ಬಂದನು. ವರನ ತಂದೆ ತಾಯಿಗಳು ವರನ ಸಮೇತ ಬಂದು ಮುಕ್ತಾಯಿಯನ್ನು ನೋಡಿದರು. ಮುಕ್ತಾಯಿಯೂ ವರನನ್ನು ನೋಡಿದಳು. ಹಿರಿಯರು ಕೂಡಿ ಮದುವೆ ನಿಶ್ಚಯಿಸಿದರು. ಮದುವೆ ನಡೆದು ಹೋಯಿತು.

ಮುಕ್ತಾಯಿಗೆ ಅಣ್ಣನನ್ನು ಅಗಲುವಾಗಿನ ದುಃಖ ಅಷ್ಟಿಷ್ಟಲ್ಲ. ತನ್ನ ತವರು ಮನೆಯಿಂದ ಗಂಡನ ಮನೆಗೆ ಹೊಸದಾಗಿ ಹೋಗುವಾಗ ಹೆಣ್ಣು ಮಕ್ಕಳು ದುಃಖಪಡುವದು ಸ್ವಾಭಾವಿಕ. ಆದರೆ ಇಲ್ಲಿ ಮುಕ್ತಾಯಿಗೆ ಅಣ್ಣನಿಂದ ಅಗಲುವ ದುಃಖವಷ್ಟೇ ಅಲ್ಲ ಆಧ್ಯಾತ್ಮದ ಗುರುವಿನ ವಿಯೋಗವೂ ಅದರಲ್ಲಿ ಅಡಕವಾಗಿತ್ತು. ಮೇಲಾಗಿ ಮನೆಯಲ್ಲಿ ಅಣ್ಣನೊಬ್ಬನನ್ನೇ ಬಿಟ್ಟು ಹೊರಟಿದ್ದೇನೆ. ಮನೆಯಲ್ಲಿ ಯಾರೂ ಇಲ್ಲ. ತಾನೇ ಕೈಬಾಯಿ ಸುಟ್ಟುಕೊಳ್ಳಬೇಕು. ನನ್ನ ಅಣ್ಣ ಶಿವಯೋಗಿ! ಮಹಾಶರಣ! ಜನರ ಮಧ್ಯದಲ್ಲಿದ್ದು, ಪರಿಸ್ಥಿತಿಯನ್ನು ಎದುರಿಸಿ ಬದುಕಿನಲ್ಲಿ ಬಂದ ಸಂಕಷ್ಟಗಳಿಗೆ ತಲೆ ಕೊಟ್ಟು, ಜೀವನದಲ್ಲಿಯ ವಿಷಮ ಗಳಿಗೆಗಳನ್ನು ನಗುನಗುತ ಸ್ವೀಕರಿಸಿ, ತನ್ನ ನೈಷ್ಠಿಕ ಭಕ್ತಿಯನ್ನು ಅವ್ಯಾಹತವಾಗಿ ನಡೆಸಿಕೊಂಡು ಬಂದವ ನನ್ನ ಅಣ್ಣ! ಸದಾ 'ಓಂ ನಮಃ ಶಿವಾಯ' ಎಂಬ ಮಂತ್ರವನ್ನು ಜಪಿಸಿ, ಮಂತ್ರ ಬೇರೆಯಲ್ಲ ತಾನು ಬೇರೆಯಲ್ಲ ಎಂಬ ಜೀವನವನ್ನು ಬದುಕಿದ ನನ್ನ ಅಣ್ಣನಿಗಾಗಿ ನಾನೇನು ಮಾಡಬಲ್ಲೆ? ಅಯ್ಯೋ! ನಾನು ನಿಸ್ಸಹಾಯಕಳು" ಎಂದು ಆಕೆಯ ಹೃದಯ ದುಃಖದಿಂದ ಉಮ್ಮಳಿಸಿ ಬಂದಿತು. ತುಂಬಿ ಬಂದ ದುಃಖವನ್ನು ಬದಿಗೆ ಸರಿಸಿ, ತನ್ನ ತುಟಿಗಳಂಚಿನಲ್ಲಿ ನಗೆ ಬೀರಿ,

"ಅಣ್ಣಾ! ...........ಹೋಗಿ ಬರುವೆ" ಎಂದಳು.

ಆ ನುಡಿಗಳಿಂದ ಆಕೆಯ ಕಣ್ಣೀರು ಕೋಡಿಯಾಗಿ ಸುರಿದವು. ಅಣ್ಣನ ಮುಖನೋಡಿ ಬಿಕ್ಕಿ ಬಿಕ್ಕಿ ಅತ್ತಳು.

ಅಜಗಣ್ಣನು ತಂಗಿಯ ಕಣ್ಣೀರು ಒರೆಸಿ, ಆಕೆಯ ತಲೆಯ ಮೇಲೆ ಮಮತೆಯ ಹಸ್ತವನ್ನೆಳೆಯುತ್ತ,

"ಮುಕ್ತಾಯಿ! ನೀನು ಜ್ಞಾನಿ; ತಿಳಿದವಳು, ಅಳಬಾರದು, ಸಂಸಾರದಿಂದ ಸದ್ಗತಿ ಪಡೆಯಬೇಕು. ಒಳ್ಳೆಯ ಗೃಹಿಣಿಯಾಗಿ, ತಾಯಿಯಾಗಿ, ಶರಣೆಯಾಗಬೇಕು. ನಾನು ಹೇಳಿಕೊಟ್ಟ ಷಡಕ್ಷರಿ ಮಂತ್ರವನ್ನು ಪಠಿಸುತ್ತಿರು. ಹೋಗಿ ಬಾ ತಂಗಿ! ಬಸವನ ಕರುಣೆ ನಿನಗಿರಲಿ!" ಎಂದು ಮನದುಂಬಿ ಹರಸಿದನು.

ಅಣ್ಣನನ್ನಗಲಿದ ದುಃಖವನ್ನು ಮನದಾಳದಲ್ಲಿ ಅದುಮಿಕೊಂಡು, ತನ್ನ ಗಂಡನ ಮನೆ 'ಮಸಳಿಕಲ್ಲ' ಗ್ರಾಮಕ್ಕೆ ಬಂದಳು.

ತಂಗಿ ಮುಕ್ತಾಯಿ ಹೊರಟು ಹೋದ ಮೇಲೆ ಅಜಗಣ್ಣನು ಮನೆಯಲ್ಲಿ ತಾನೇ ತಾನಾದನು. ಷಡಕ್ಷರಿ ಮಂತ್ರಯೋಗದಲ್ಲಿ ಕಾಲ ಕಳೆಯಹತ್ತಿದನು. ಶಿವಯೋಗದಲ್ಲಿ ಗುರುವು ಷಡಕ್ಷರಿ ಮಂತ್ರವನ್ನು ಕರುಣಿಸುತ್ತಾನೆ. ಮಾಂಸ ಪಿಂಡವು, ಮಂತ್ರ ಪಿಂಡವಾಗುವಂತೆ ಪರಿವರ್ತನೆಗೊಳಿಸುವದೇ ಈ ಶಿವಯೋಗದ ಸಿದ್ಧಿ, ಕರಣಂಗಳೆಲ್ಲವೂ ಮಂತ್ರಮಯವಾಗಿ, ಪ್ರಾಣ ಲಿಂಗಮಯವಾಗಿ ಪ್ರಾಣಲಿಂಗಿಯಾಗುತ್ತಾನೆ. ಜಪ ಮಾಡುವ ಮಂತ್ರ ಬೇರೆ, ತಾನು ಬೇರೆ ಎಂಬ ಸ್ಥಿತಿ ಅಲ್ಲಿ ಉಳಿಯುವುದಿಲ್ಲ. ಮಂತ್ರ ಪ್ರಾಣದಿಂದ ಬೇರೆಯಾಗಿ ಹೊರಟು ಹೋದರೆ ಪ್ರಾಣ ಉಳಿಯುವುದಿಲ್ಲ. ಮಂತ್ರ ಪ್ರಾಣದಿಂದ ಬೇರೆಯಾಗಿ ಹೋರಟು ಹೋದರೆ ಪ್ರಾಣ ಹೋದಂತೆಯೇ. ಕರಣಂಗಳು ಲಿಂಗಮಯವಾಗಿ ಷಡಕ್ಷರಿ ಮಂತ್ರ ರೋಮ ರೋಮಗಳಲ್ಲಿ ವ್ಯಾಪಿಸಿದಾಗ ಅಂಗಗುಣಗಳು ಲಿಂಗಕ್ಕೆ ಅರ್ಪಿತವಾಗಿ ಲಿಂಗವೆ ತಾನಾಗುತ್ತಾನೆ. ಅಂಥ ಅನುಭಾವ ಅಳವಟ್ಟಾಗ ಮಾತು, ದೃಷ್ಟಿ, ಶ್ರವಣ, ಸ್ಪರ್ಶಗಳೆಲ್ಲ ಅಂತರಮುಖವಾಗುತ್ತವೆ.

ಅಜಗಣ್ಣ ಅನುಭಾವಿಯಾಗಿ, ಜ್ಞಾನ ಮೂರುತಿಯಾಗಿ, ತನ್ನ ಶಿವ ಯೋಗಾನಂದದಲ್ಲಿ ತಾನೇ ತಾನಾಗಿ ಇರುತ್ತಿದ್ದನು. ಅಂತೆಯೇ ಶರಣರು ಅಕಾಯ ಚರಿತರು. ಮರಣವನ್ನು ಗೆದ್ದ ಮಹಂತರು. ಆದರೆ ಶರೀರಧಾರಿಗಳಾಗಿ ಬಂದ ಮೇಲೆ ಕಾಯಕವನ್ನು ಮಾಡಿಕೊಂಡು ಬದುಕುತ್ತಾರೆ. ಹಾಗೆ ಅಜಗಣ್ಣನ ಬಾಳು, ಬದುಕು, ಏಕಾಕಿಯಾಗಿ, ಐಕ್ಯೈಕ ಜೀವನ ಸಿದ್ಧಿಯನ್ನು ಪಡೆದು, ಕೇವಲ ತಾನೆಯಾಗಿ ತನ್ನಷ್ಟಕ್ಕೆ ಇದ್ದು, ಕೈವಲ್ಯದ ದಾರಿಯಲ್ಲಿ, ಅವನ ಜೀವನ ಪಥವು ಸಾಗಿತು. ಅವನ ಮನೆ ಕೈವಲ್ಯ ಧಾಮವಾಯಿತು.

ಶಿಶು ಕೂರ್ಮ (ಆಮೆ) ತನ್ನ ತಾಯಿಯನ್ನು ನೆನೆದು ಪೋಷಣೆಗೊಂಡು ದೊಡ್ಡದಾಗುವಂತೆ ಮುಕ್ತಾಯಿ ಅಣ್ಣನ ನೆನಪಿನಲ್ಲಿ ಬೆಳೆಯುತ್ತಿದ್ದಳು.

ಒಂದು ದಿನ ಏಳುತ್ತಲೇ ಆಕೆಗೆ ಏನೋ ಒಂದು ತರದ, ಏನೊಂದು ತಿಳಿಯದೆ ಮನ ಚಡಪಡಿಸಹತ್ತಿತು. ತುಂಬಿದ ತನ್ನ ಮನೆಯಲ್ಲಿ ಎಲ್ಲವೂ ಶೂನ್ಯವಾಗಿ ಕಾಣಹತ್ತಿತು. ಇಷ್ಟೇಕೆ ಹತಾಶಳಾಗಿದ್ದೇನೆ ಎಂಬುದು ಆಕೆಗೆ ತಿಳಿಯಲೊಲ್ಲದು. ಆಕೆಯ ಮನ ತನ್ನ ಅಣ್ಣನ ಕಡೆ ಸೆಳೆಯುತ್ತಿದೆ. ಅದೇ ವಿಚಾರದಲ್ಲಿ ಮಗ್ನಳಾಗಿ ಒಮ್ಮೆಲೆ ಅಣ್ಣಾ!!! ಎಂದು ಓಡಿ ಹೊರಗೆ ಬರುತ್ತಾಳೆ. ಮತ್ತೆ ಹತಾಶಳಾಗಿ ಒಳಗೆ ಬಂದು ಕುಳಿತುಕೊಳ್ಳುತ್ತಾಳೆ. ಇಂದು ಇಷ್ಟೇಕೆ ವಿಹ್ವಲಳಾಗಿದ್ದಾಳೆ ಎಂಬುದು ಯಾರಿಗೂ ಅರ್ಥವಾಗುತ್ತಿಲ್ಲ. ಮುಂದೆ ಸ್ವಲ್ಪ ಹೊತ್ತಿನಲ್ಲಿ ಲಕ್ಕುಂಡಿಯಿಂದ ಸುದ್ದಿಯನ್ನು ಹೊತ್ತು ತಂದ ಒಬ್ಬ ಮನುಷ್ಯ ಬರುತ್ತಾನೆ.

ಅವನು ಮುಕ್ತಾಯಕ್ಕನ ಮನೆಗೆ ಬಂದು 'ನಾನು ಲಕ್ಕುಂಡಿಯವ. ಆ ಊರ ಹಿರಿಯರು ನನ್ನನ್ನು ಕಳಿಸಿದ್ದಾರೆ. ಇಂದು ಬೆಳಿಗ್ಗೆ ಕೊಡವನ್ನು ಹೊತ್ತುಕೊಂಡು ಮನೆಯ ಬಾಗಿಲನ್ನು ದಾಟುವಾಗ ಅಜಗಣ್ಣನವರ ನೆತ್ತಿಗೆ ಬಾಗಿಲವು ಬಡಿಯಿತು. ಅಜಗಣ್ಣ 'ಓಂ ನಮಃ ಶಿವಾಯ' ಎಂದು ಕೂಗಿದನಂತೆ. ಆ ಮಂತ್ರ ಬಾಯಿಂದ ಉಚ್ಚರಿಸಿದ ಕೂಡಲೆ ಅವರ ಪ್ರಾಣ ಹಾರಿಹೋಯಿತು. ಅದಕ್ಕಾಗಿ ಮುಕ್ತಾಯಕ್ಕನವರಿಗೆ ಹಾಗೂ ಮನೆಯವರಿಗೆ ತಿಳಿಸಲು ಕಳುಹಿಸಿಕೊಟ್ಟಿದ್ದಾರೆ" ಎಂದನು.

ಮುಕ್ತಾಯಿಗೆ ಇದನ್ನು ಕೇಳಿ ಸಿಡಿಲುಬಡಿದಂತಾಯಿತು. ಆಕೆ ಕೂಡಲೇ ಮನೆಯವರೊಡನೆ ಲಕ್ಕುಂಡಿಗೆ ಧಾವಿಸಿ ಬರುತ್ತಾಳೆ. ಅಣ್ಣನ ತಲೆಯನ್ನು ಅಂಗೈಯಲ್ಲಿ ಎತ್ತಿ ಹಿಡಿದು ಆಲಾಪಿಸುತ್ತಾಳೆ. ಆಕೆಗಾದ ದುಃಖ–ವೇದನೆಯನ್ನು ಹಾಡಿಕೊಂಡು ಅಳುವ ನುಡಿಯನ್ನೂ ಕೇಳಿ ನೆರೆದ ಜನರೆಲ್ಲ ಕಣ್ಣೀರು ಹರಿದವು. ಎಷ್ಟು ಹೊತ್ತು ಕಳೆದರೂ ಆಕೆಯ ಶೋಕ, ಆಲಾಪಗಳು ಸಾಂತ್ವನಗೊಳ್ಳಲಾರವು.

ಅಂದು ಯೋಗಾಯೋಗದಿಂದ ಸಂಚಾರ ಕೈಕೊಂಡಿದ್ದ ಮಹಾಯೋಗಿ ಅಲ್ಲಮಪ್ರಭುದೇವರು ಲಕ್ಕುಂಡಿಗೆ ಬರುತ್ತಾರೆ. ಬಹುತರ ಅವರು ಅಜಗಣ್ಣನನ್ನು ಕಾಣಲೆಂದೇ ಅತ್ತ ಬಂದಿರಬಹುದು. ಅದೇ ಸಮಯಕ್ಕೆ ಅವರು ಅಜಗಣ್ಣನ ಬಾಗಿಲಿಗೆ ಬರುತ್ತಾರೆ. ಅಲ್ಲಿ ಅವರು ನೋಡಿದ ಈ ದೃಶ್ಯವು ಅವರ ಮೇಲೆ ಬಹಳಷ್ಟು ಪರಿಣಾಮವನ್ನು ಉಂಟುಮಾಡುತ್ತದೆ. ಅಜಗಣ್ಣನನ್ನು ತೊಡೆಯ ಮೇಲಿರಿಸಿಕೊಂಡು ಆಕೆ ಮಾಡುತ್ತಿರುವ ಪ್ರಲಾಪದ ತೀವ್ರ ಭಾವ, ಭಾಷೆ, ಅನಿಸಿಕೆಗಳನ್ನು ಕೇಳಿ "ಇವಳು ಸಾಮಾನ್ಯಳಲ್ಲ, ಇವಳು ಅನುಭಾವಿ, ಜ್ಞಾನಿಯಾಗಿದ್ದಾಳೆ. ಹೀಗಿದ್ದೂ ಮರಣವನ್ನು ಗೆದ್ದ ಈ ಮಹಂತನ ಬಗ್ಗೆ ಶೋಕವೇಕೆ ಮಾಡಬೇಕು? ಹುಟ್ಟಿದವರಲ್ಲವೆ ಸಾಯುವುದು, ಹುಟ್ಟು ಸಾವುಗಳನ್ನು ಮೀರಿದ ಈ ಶರಣನ ಬಗ್ಗೆ ಇಷ್ಟೊಂದು ದುಃಖಿಸುವುದೇಕೆ?" ಈಕೆ ಯಾರಿರಬಹುದು? ಎಂದು ಆಕೆಗೆ ಸಮಾಧಾನ ಮಾಡಲು ಯತ್ನಿಸುತ್ತಾನೆ.

ಮುಕ್ತಾಯಿ ಮತ್ತು ಅಜಗಣ್ಣ ಇವರು ಸಾಂಕೇತಿಕ ಪ್ರತಿಮೆಗಳಾಗಿ ರೂಪಗೊಳ್ಳುತ್ತಾರೆ. ಅಜಗಣ್ಣ ಲಿಂಗದ ಚಿತ್ಕಳೆಯ ಸ್ವರೂಪನಾದರೆ ಮುಕ್ತಾಯಿ ಅಂಗಗುಣಗಳ ಶಕ್ತಿ ಸ್ವರೂಪಿಣಿಯಾಗುತ್ತಾಳೆ. ಪ್ರಭುದೇವರು ಜ್ಞಾನ ಸ್ವರೂಪರಾಗಿ ಮುಕ್ತಾಯಿಗೆ ಜ್ಞಾನ ಬೋಧೆಯನ್ನು ಮಾಡುತ್ತಾರೆ. ಮಾತಾಡುವ, ಚಲಿಸುವ, ಜ್ಞಾನಮಯ ಮಹಾಲಿಂಗ ಸ್ವರೂಪರಾಗಿ ಆಕೆಯ ಮುಂದೆ ನಿಲ್ಲುತ್ತಾರೆ. ಶೂನ್ಯ ಸಂಪಾದನೆಯ ದ್ವಿತಿಯೋಪದೇಶದಲ್ಲಿ ಬರುವ "ಪ್ರಭುದೇವರ ಮತ್ತು ಮುಕ್ತಾಯಕ್ಕಗಳ ಸಂಪಾದನೆ" ಸಂವಾದವು ಗೂಢ ಆಧ್ಯಾತ್ಮದ ಅಮೂಲ್ಯದ ನಿರೂಪಣೆಯಾಗಿದೆ. ಅವರ ಸಂವಾದವು ಬಹಳ ದೀರ್ಘವಾಗಿದ್ದು, ಅರ್ಥೈಸಿಕೊಳ್ಳಲು ಅಷ್ಟೇ ಬಿಕ್ಕಟ್ಟಾಗಿದೆ. ಅದರ ಕೆಲವೊಂದು ಸಾರಾಂಶವನ್ನು ಮಾತ್ರ ಇಲ್ಲಿ ಹೇಳಲಾಗಿದೆ.

ಪ್ರಭುದೇವರು ಮುಕ್ತಾಯಕ್ಕನಿಗೆ ಹೀಗೆ ಪ್ರಶ್ನೆ ಮಾಡುತ್ತಾರೆ, "ಅಂಗೈಯೊಳಗೊಂದು ಅರಳ್ದ ತಲೆ ಹಿಡಿದುಕೊಂಡು ಕಂಗಳ ಮುತ್ತ ಪವಣಿಸುವಾಕೆ ನೀನಾರು ಹೇಳಾ? ನಿನ್ನ ಈ ದುಃಖಕ್ಕೆ ಕಾರಣವೇನು? ನಾನು ತಿಳಿದ ಹಾಗೆ ಒಂದೆಮ್ಮೆನೆ ! ಎರಡಾಗಿದೆ; ಎರಡೆಂಬೆನೆ? ಒಂದಾಗಿದೆ. ಅನುತಾಪವಿಲ್ಲದೆ ದುಃಖ ಮಾಡುವ ನೀನಾರು ಎಂದು ಹೇಳಬಲ್ಲೆಯಾ?"

ಮುಕ್ತಾಯಕ್ಕನ ಮುಂದೆ ಬಂದು ನಿಂತಿರುವ ಮೂರ್ತಿ ಪರಾಶಕ್ತಿಯ ಪ್ರತಿರೂಪವಾಗಿ ನಿಂತಿರುವ ತೇಜೋಮಯನು, ಆ ಮಹಾ ಮಹಿಮನನ್ನು ಕಂಡು, ಮುಕ್ತಾಯಕ್ಕ ನೀನಾರು? ಎಂದು ಹೇಳಬಲ್ಲೆಯಾ? ಎಂದು ಕೇಳುವ ಪ್ರಶ್ನೆಯು ಸಾಮಾನ್ಯವಾದುದಲ್ಲ.

ಅದಕ್ಕೆ ಇನ್ನೊಬ್ಬ ಮಹಾಜ್ಞಾನಿ ಅಜಗಣ್ಣನ ಬಳಿವಿಡಿದು ಬಂದ ತಂಗಿ. ಮುಕ್ತಾಯಿ ಅವನ ಶಿಷ್ಯಳೂ ಹೌದು. ಅದಕ್ಕಾಗಿ ಪ್ರಭುದೇವರು ಕೇಳಿದ ದಾಟಿಯಲ್ಲಿಯೆ ಉತ್ತರಿಸುತ್ತಾಳೆ.

"ನಾನು ಆರು ಎಂಬ ಕುರುಹು ನಾನು ಹೇಗೆ ಹೇಳಲಿ. ನಾನು ಅಯೋನಿಜಳು. ತಂದೆ ತಾಯಿಗಳಿಲ್ಲ. ಭಾವ ಭ್ರಮೆ ಇಲ್ಲ. ಶರೀರಕ್ಕೆ ಹೆಸರುಂಟುಲ್ಲದೆ ಆತ್ಮಕ್ಕೆ ಉಂಟೆ? ಅದು ನಾಮರೂಪದಿಂದ ಅತೀತವಾಗಿದೆ" ಎಂದು ಆತ್ಮದ ಸ್ವರೂಪವನ್ನು ಅನುಭಾವದಲ್ಲಿ ಹೇಳುತ್ತಾಳೆ.

ಪ್ರಭುದೇವರಿಗೂ ಅದೇ ಉತ್ತರ ಬೇಕಾಗಿತ್ತು. ಏಕೆಂದರೆ ಆಕೆ ಪಡುತ್ತಿರುವ ದುಃಖ, "ಅಣ್ಣನು ತನ್ನಿಂದ ವಿಯೋಗವಾಗಿದ್ದಾನೆ. ಮರಣ ಹೊಂದಿದ್ದಾನೆ" ಎಂಬ ಭ್ರಮೆಯನ್ನು ನಿರಸನ ಮಾಡಬೇಕಾಗಿತ್ತು. ಆಕೆ ನೇರವಾಗಿ ನನ್ನ ಹೆಸರು ಹೀಗೆ, ನನ್ನ ತಂದೆ ತಾಯಿಗಳ ಹೆಸರು ಹೀಗೆ, ಇದು ನನ್ನ ತವರುಮನೆ ನನ್ನನ್ನು ಮಸಳೆಕಲ್ಲಿಗೆ ಕೊಟ್ಟಿದ್ದಾರೆ ಎಂದು ತನ್ನ ಲೌಕಿಕದ ಪರಿಚಯವನ್ನು ಹೇಳಿಕೊಂಡಿದ್ದಾರೆ ಈ ಸಂವಾದದ ರೂಪವೇ ಬದಲಾಗುತ್ತಿತ್ತು. ಆದರೆ ಶೂನ್ಯ ಸಂಪಾದನೆಕಾರರು ಈ ಸಂದರ್ಭವನ್ನು ಅನುಭಾವದ ಮಹಾದರ್ಶನವನ್ನು ವಿವರಿಸುವ ಸನ್ನಿವೇಶವನ್ನಾಗಿ ಮಾರ್ಪಡಿಸಿದ್ದಾರೆ.

ಮುಕ್ತಾಯಿ "ತಾನು ಆತ್ಮ ಸ್ವರೂಪಳಾಗಿದ್ದೇನೆ ಎಂದು ಹೇಳಿದಾಗ ಪ್ರಭುದೇವರು ಸುಖದುಃಖಗಳಿಂದ ಅತೀತಳಾದ ನೀನು, ಹುಟ್ಟದೆ ಇರುವ ಚಿತ್ಕಳೆಯ ಸ್ವರೂಪನಾದ ನಿನ್ನ ಅಣ್ಣನಿಗೆ ಹೇಗೆ ಸಾವು ಬಂದೀತು? ನೀನು ಅಳುವುದನ್ನು ನೋಡಿದರೆ ಆಶ್ಚರ್ಯವೆನಿಸುತ್ತದೆ. ಹುಟ್ಟಿದವರಿಗೆ ಸಾವುಂಟು. ಶರಣ ಅಜಗಣ್ಣ ಅಜಾತ, ಅಖಂಡ ಚರಿತ, ಅವನಿಗೆ ಸಾವೆಲ್ಲಿ ಬಂತು? ಮಂತ್ರ ಸ್ವರೂಪನಾದ ಅಜಗಣ್ಣ ಪ್ರಣವದೊಡನೆ ಒಂದಾಗಿದ್ದಾನೆ. ನಿನ್ನ ಶೋಕಕ್ಕೆ ಕಾರಣವಿಲ್ಲ. ನೀನು ಅಜಗಣ್ಣನ ತಂಗಿ, ಬಳಿವಿಡಿದು ಬಂದವಳು ಎಂದು ನಾನು ಹೇಗೆ ನಂಬಲಿ?" ಎಂದು ಪ್ರಭುದೇವರು ಕೇಳುತ್ತಾರೆ.

ಮುಕ್ತಾಯಿ : ನನ್ನ ಅಣ್ಣನನ್ನು ಗುರ್ತಿಸುವವ ನೀನಾರು" ಎಂದು ಕೇಳುತ್ತಾಳೆ.

"ನಾನು ಅಜಗಣ್ಣನ ನಿಲುವಿನವ, ಅಂತಸ್ತಿನವನೆ!"

"ಇದು ಹೇಗೆ ಸಾಧ್ಯ? ನನ್ನ ಅಣ್ಣ ಶಿವಯೋಗದಲ್ಲಿ ನಿರತನಾಗಿ ಕೊನೆ ಕೊನೆಗೆ ಏನೂ ಮಾತಾಡುತ್ತಿರಲಿಲ್ಲ. ನೀನು ಮಾತನಾಡುತ್ತಿ. ಇನ್ನೂ ದ್ವಂದ್ವದಲ್ಲಿಯೇ ಇರುವವರು ನನ್ನ ಅಣ್ಣನಂತೆ ಹೇಗಾಗಬಲ್ಲರು?" ಎಂಧು ಪ್ರಭುದೇವರನ್ನೇ ಮೂದಲಿಸುತ್ತಾಳೆ.

ಅದಕ್ಕೆ ಪ್ರಭುದೇವರು: "ನೀನು ಹೇಳುವ ಮಾತು ಸರಿಯೇ! ಆದರೆ ನೀನು ಇಂದು ಮುಳುಗಿರುವ ಅಜ್ಞಾನದಿಂದ ಬಿಡುಗಡೆ ಮಾಡಿ. ಭ್ರಮೆ ನಿರಸನವನ್ನು ಮಾಡುವ ಉದ್ದೇಶದಿಂದ ಬಂದಿದ್ದೇನೆ. ಶರಣರ ಆಣತಿಯ ಹೊತ್ತು ತಂದು ಅವರ ಕರುಣೆಯ ಕೂಸಾದ ನಿನಗೆ ಜ್ಞಾನೋಪದೇಶ ಮಾಡುವ ಕಳಕಳಿಯಿಂದ ನಾನು ಶಬ್ದಗಳನ್ನು ಬಳಸಿ, ದ್ವಂದ್ವಕ್ಕೆ ಮೊರೆಹೋಗಿದ್ದೇನೆ ಅಷ್ಟೇ!"

ಹೀಗೆ ಇಬ್ಬರಲ್ಲಿ ಚರ್ಚೆಯು ಬಹು ಅಗಾಧವಾಗಿಯೂ, ಸ್ವಾರಸ್ಯವಾಗಿಯೂ ಮುಂದುವರಿಯುತ್ತದೆ.

ಕೊನೆಗೆ ಮುಕ್ತಾಯಿ ತನ್ನ ಮುಂದೆ ಬಂದು ನಿಂತವರು ಕಲ್ಯಾಣದ ಅನುಭವ ಮಂಟಪದ ಅಧ್ಯಕ್ಷರಾದ ಪ್ರಭುದೇವರು ಎಂದು ತಿಳಿಯುತ್ತಾಳೆ. ಅಜಗಣ್ಣನು ಬೇರೆಯಲ್ಲ, ಪ್ರಭುದೇವರು ಬೇರೆಯಲ್ಲ ಎಂಬುದನ್ನು ಮನಗಾಣುತ್ತಾಳೆ.

ಇಲ್ಲಿ ನಾವು ಗಮನಿಸಬೇಕಾದ ವಿಷಯ ಮುಖ್ಯವಾಗಿ ೧೨ನೇ ಶತಮಾನದ ಶಿವಶರಣೆಯರು ತನ್ನ ಸಮಕಾಲೀನ, ಮಹಾಜ್ಞಾನಿಗಳು, ಮಹಾಮಹಿಮಾವಂತರು, ಪ್ರವಾದಿಗಳು ಎಂದು ಕೀರ್ತಿವೆತ್ತ ಪುರುಷಶ್ರೇಷ್ಠರನ್ನು ಕೂಡ ಆಧ್ಯಾತ್ಮದ ಚರ್ಚೆಯಲ್ಲಿ ಎದುರಿಸಿ, ನಿರ್ಭಯರಾಗಿ, ಯಥಾರ್ಥಜ್ಞಾನವನ್ನು ಪಡೆದು ಅವರೊಡನೆ ಚರ್ಚೆಗೆ ನಿಲ್ಲುತ್ತಾರೆ. ತಮ್ಮ ಹಿರಿಮೆಯನ್ನು ತೋರಿಸಿಕೊಡುತ್ತಾರೆ. ಪುರುಷರಿಂದ ಬಂದ ಬೋಧನೆ, ಜ್ಞಾನವನ್ನು ಸಹಜವಾಗಿ ಸ್ವೀಕರಿಸದೆ, ತಮ್ಮ ಅನುಭಾವದ ಒರೆಗಲ್ಲಿಗೆ ಹಚ್ಚಿ, ಸ್ತ್ರೀ ಸಮಾನತೆಯನ್ನು ಆಧ್ಯಾತ್ಮ ಕ್ಷೇತ್ರದಲ್ಲಿಯೂ ಚಿರಂತನವಾಗಿ ಉಳಿಸಿಕೊಂಡಿದ್ದಾರೆ. ಅದು ಭಾರತ ಇತಿಹಾಸದಲ್ಲಿ ಶರಣೆಯರು ಸಾಧಿಸಿದ ಮಹಾಸಾಧನೆ!

ಅನಂತರ ಮುಕ್ತಾಯಕ್ಕ ಕಲ್ಯಾಣಕ್ಕೆ ಹೋಗಿ ಕೆಲಕಾಲ ಇದ್ದಿರಬಹುದು ಅನಿಸುತ್ತದೆ. ಏಕೆಂದರೆ ಆಕೆಯ ವಚನಗಳಲ್ಲಿ ಕಲ್ಯಾಣ ಶರಣ ಶರಣೆಯರ ಬಗ್ಗೆ ಉಲ್ಲೇಖಗಳು ಬರುತ್ತವೆ. ಅವರೊಡನೆ ಆಕೆಯ ಒಡನಾಟವಿತ್ತೆಂಬುದು ಸ್ಪಷ್ಟವಾಗುತ್ತದೆ.

ಮುಕ್ತಾಯಕ್ಕನು ವಚನಕಾರ್ತಿಯರಲ್ಲಿ ಅಗ್ರಗಣ್ಯಳಾಗಿದ್ದಾಳೆ.

ಮುಕ್ತಾಯಕ್ಕನ ಕೆಲವು ವಚನಗಳಲ್ಲಿ ಕಂಡು ಬರುವಂತಹ ಭಕ್ತಿ ಮತ್ತು ಕಾಯಕ ನಿಷ್ಠೆಯನ್ನು ಈ ಕೆಳಕಂಡಂತೆ ಕಾಣಬಹುದಾಗಿದೆ.

ಮುಕ್ತಾಯಕ್ಕನ ವ್ಯಕ್ತಿ ವೈಶಿಷ್ಟತೆಗಳ ಪ್ರಭಾವ ಮುದ್ರೆಯನೊತ್ತುವ ಈ ವಚನಗಳು ಶಿವಯೋಗದ ತಂತ್ರಗಳನೆಲ್ಲ ಅಳವಡಿಸಿಕೊಂಡಿರುವ ಯೋಗಸಾಧನೆಯು ಪರಮಗಂತವ್ಯವನ್ನು ಸಾಧಿಸಿದ ಅಮೃತ-ಮುಕ್ತ ಫಲಗಳೆಂದೇ ಹೇಳಬಹುದು. ಶ್ರೇಷ್ಠ ಶಿವಶರಣೆಯಾದ ಮುಕ್ತಾಯಕ್ಕ ಕಲ್ಯಾಣದ ಅನುಭವಮಂಟಪದ ಪರಿಸರದಲ್ಲಿ ಬೆಳಗಿದ ಮಹಾಚೇತನ ಬಸವಾದಿ ಪ್ರಮಥ ಪುಂಗವರನ್ನು ಮುಕ್ತ ಕಂಠದಿಂದ ಹಾಡಿಕೊಂಡಾಡಿದ್ದಾಳೆ.

"ಎನ್ನ ಭಾವಕ್ಕೆ ಗುರುವಾದನಯ್ಯಾ ಬಸವಣ್ಣನು
ಎನ್ನ ನೋಟಕ್ಕೆ ಲಿಂಗವಾದನಯ್ಯಾ ಚೆನ್ನಬಸವಣ್ಣನು
ಎನ್ನ ಜ್ಞಾನಕ್ಕೆ ಜಂಗಮವಾದನಯ್ಯಾ ಪ್ರಭುದೇವರು
ಎನ್ನ ಪರಿಣಾಮಕ್ಕೆ ಪ್ರಸಾದವಾದನಯ್ಯಾ ಮರುಳಶಂಕರದೇವರು
ಎನ್ನ ಹೃದಯಕ್ಕೆ ಮಂತ್ರವಾದನಯ್ಯಾ ಮಡಿವಾಳಯ್ಯನು
ಇಂತಿ ಐವರ ಕಾರುಣ್ಯ ಪ್ರಸಾದವ ಕೊಂಡು
ಬದುಕಿದೆನಯ್ಯಾ ಅಜಗಣ್ಣ ತಂದೆ"

ಮುಕ್ತಾಯಕ್ಕ ಅನುಭವ ಮಂಟಪದ ಕ್ರಿಯಾಶೀಲ ಸದಸ್ಯೆಯಾಗಿದ್ದಳು, ಎಂಬುದಕ್ಕೆ ಈ ವಚನ ನಮ್ಮ ಸಹಾಯಕ್ಕೆ ಬರುತ್ತದೆ. ಈ ವಚನದಲ್ಲಿ ಉಲ್ಲೇಖಿಸಲಾದ ಬಸವಣ್ಣ, ಚನ್ನಬಸವಣ್ಣ, ಪ್ರಭುದೇವ, ಮರಳಶಂಕರದೇವ, ಮಡಿವಾಳಯ್ಯ ಮೊದಲಾದ ಶರಣರ ಹೆಸರುಗಳೇ ಸಾಕ್ಷಿ. ಈ ಐವರ ಪ್ರಸಾದವ ಪಡೆದು ಧನ್ಯಳಾದೆನೆಂಬ ಮಾತು ಇನ್ನಷ್ಟು ಪುಷ್ಟಿಕೊಡುತ್ತದೆ. ಭಾವ ನೋಟ, ಜ್ಞಾನ ಪರಿಣಾಮ ಹೃದಯಗಳನ್ನು ಸಂಸ್ಕರಿಸಿದ ಐವರನ್ನು ಮಂತ್ರಮಯವಾಗಿ ಮಾಡಿದ್ದಾಳೆ ಮುಕ್ತಾಯಕ್ಕ.

ಅನುಪಮ ಅನುಭಾವಿಯಾದ ಮುಕ್ತಾಯಕ್ಕ ಗಣಾಚಾರದ ಗುಣಾನ್ವಿತೆಯೂ ಹೌದು. ಈ ಮಾತಿಗೆ ನಿದರ್ಶನ ಈ ವಚನ.

"ಸುಮ್ಮನೇಕೆ ದಿನ ಕಳೆವಿರಿ, ಸುಮ್ಮನೇಕೆ ಹೊತ್ತುಗಳೆವಿರಿ?
ಸುಮ್ಮನೇಕೆ ಹೊತ್ತುಗಳೆವಿರಿ ಸ್ವಾಮಿಗಳಿರಾ?
ಮಾಡಬನ್ನಿ ದಿನ ಶಿವರಾತ್ರಿಯ ಕೇಳಬನ್ನಿ ಶಿವಾನುಭವವ
ನೋಡಬನ್ನಿ ಅಜಗಣ್ಣನಿರವ ಬಸವಣ್ಣತಂದೆ"[೨]

ಮುಕ್ತಾಯಕ್ಕ ಕ್ರಿಯಾಜ್ಞಾನಗಳ ಸಂಗಮ, ಗುಣಾಚಾರದ ಗುಣಾನ್ವಿತೆ. ನೇರವಾದ ಮಾತು, ಸರಳವಾದ ನಡೆ, ಒಳಹೊರಗೆಂಬುದೇ ಗೊತ್ತಿಲ್ಲ. ಅಂತೆಯೆ ಆಕೆಯ ಹೃದಯದಿಂದ ದಿಟಪುಟವಾದ ನುಡಿಮುತ್ತೊಂದು ಹೀಗೆ ಹೊರಹೊಮ್ಮಿದೆ. ವ್ಯರ್ಥವಾಗಿ ಇಲ್ಲದ ಆಡಂಬರದ ದೊಂಬರಾಟಕ್ಕೆ ಮರುಳಾದ ಸ್ವಾಮಿಗಳನ್ನು ಎಚ್ಚರಿಸಿದ್ದಾಳೆ. ಅವರು ಮಾಡಬೇಕಾದ ಕರ್ತವ್ಯದ ಕಡೆಗೆ ಬೆರಳು ತೋರಿಸಿದ್ದಾಳೆ. ಶಿವಾನುಭವದ ತತ್ತ್ವವನ್ನು ಮನೆಮನೆಗೆ ಮುಟ್ಟಿಸುವುದೆ ಸ್ವಾಮಿಗಳಾದವರ ಪ್ರಮುಖ ಕರ್ತವ್ಯವಾಗಿದೆ ಎನ್ನುವ ಧ್ವನಿ ಈ ಮೇಲಿನ ವಚನದಲ್ಲಿದೆ.

"ಅಂಧಕನ ಕೈಯ ಅಂಧಕ ಹಿಡಿದಂತಿರ ಬೇಕು
ಮೂಗನ ಕೈಯಲ್ಲಿ ಕಾವ್ಯವ ಕೇಳಿದಂತಿರಬೇಕು
ದರ್ಪಣದೊಳಗಣ ಪ್ರತಿಬಿಂಬದಂತೆ
ಹಿಡಿವರಿಗಳವಲ್ಲದಿರಬೇಕು ಅಣ್ಣ!
ಕೂರ್ಮನ ಶಿಶುವಿನ ಸ್ನೇಹದಂತೆ ಇರರೊಲ್ಲದೆ
ಆರೂಢಗೆಟ್ಟೆಯೊ ಅಜಗಣ್ಣಾ!"[೩]

ಮೇಲಿನ ವಚನದಲ್ಲಿ ಮೂಡಿ ಬಂದಿರುವ ಪ್ರತಿಮೆಗಳು ಪರಸ್ಪರ ಸಹಕಾರ ಪ್ರೀತಿ ಸ್ನೇಹ ನಂಬಿಕೆಗಳಿಗೆ ಸಂಕೇತವಾಗಿವೆ. ಮುಕ್ತಾಯಕ್ಕನ ಸ್ವತಂತ್ರವಾದ ವಿವೇಚನೆಯ ಅಭಿವ್ಯಕ್ತಿಗೆ ಪ್ರತೀಕವಾಗಿವೆ. ಮುಕ್ತಾಯಕ್ಕನಿಗೆ ಗುರುವೇ ಅಧಿಕ. ಗುರುವೇ ಸರ್ವಸ್ವ. ಗುರುವಿನ ಮಹತ್ವವನ್ನು ಕುರಿತಾಗಿ ಅವಳು ನಿರೂಪಿಸಿದ ಈ ವಚನವಂತೂ ಮನೋಜ್ಞವಾಗಿದೆ.

ಕುರುಡನ ಕೈ ಕುರುಡ ಹಿಡಿದರೆ ಸ್ಪರ್ಶವಿದೆಯಲ್ಲದೆ ನೋಟವಿಲ್ಲ. ಮೂಗನ ಕಾವ್ಯ ಅನುಭವವೇದ್ಯ. ಕೇಳಲು ಅಸಾಧ್ಯ. ಅದೇ ಕನ್ನಡಿಯೊಳಗಿನ ಪ್ರತಿಬಿಂಬ ಹಿಡಿಯಲು ಸಾಧ್ಯವಾಗದಿದ್ದರೂ ಕಣ್ಣಿಗೆ ಗೋಚರವಾಗುವಂತೆ ಅಜಗಣ್ಣನ ನಿಲುವು. ಆಮೆ ತನ್ನ ಮಗು ನೋಡಿ ಪೋಷಿಸುವಂತೆ ನೀನು ಪ್ರತ್ಯಕ್ಷ ಆರೂಢ ಸ್ಥಿತಿಯಲ್ಲಿದ್ದರೂ ನನ್ನನ್ನು ಪೋಷಿಸುತ್ತಿದ್ದಿ. ಬಯಲಲ್ಲಿ ಬಯಲಾಗಿದ್ದ ನೀನು ಮತ್ತೆ ಬಯಲಾದುದೇಕೆ? ಎಂಬುದಾಗಿ ನುಡಿದಿರುವುದು ಬಹಳ ಮನೋಜ್ಞವಾಗಿದೆ.

> "ಅಹುದಹುದು ಶಿವಶರಣರ ಮಹಿಮೆ ಆರಿಗೆಯೂ ಕಾಣಬಾರದು
> ಕಬ್ಬುನವುಂಡ ನೀರಿನಂತೆ, ಕಬ್ಬಿಸಿಲುಂಡ ಅರಿಸಿನದಂತೆ
> ಉರಿಯೊಳಡಗಿದ ಕರ್ಪೂರದಂತೆ ಬಯಲಿನಪ್ಪಿದ ವಾಯುವಿನಂತೆ
> ಇಪ್ಪ ನಿಲವು ನುಡಿದು ಹೇಳಿಹೆನೆಂಬ ಮಾತಿಂಗೆ ಅಳವಡುವುದೆ?
> ಅರಿವಡೆ ಮತಿಯಿಲ್ಲ, ನೆನೆವಡೆ ಮನವಿಲ್ಲ;
> ಎನ್ನ ಅಜಗಣ್ಣ ತಂದೆಯನೊಳಕೊಂಡಿಪ್ಪ ನಿಮ್ಮ ಮಹಿಮೆಗೆ
> ನಮೋ ನಮೋ ಎನುತಿರ್ದೆನು."[೪]

ಶರಣರ ಚರಿತ್ರೆ ಲೋಕದ ಮಾನವರಿಗೆ ಮರುಳಾಗಿ ತೋರುತ್ತದೆ. ಆದರೆ ಮುಕ್ತಾಯಕ್ಕ ಅಲ್ಲಮಪ್ರಭುದೇವನ ಸಂಪರ್ಕದಿಂದ ಚೊಕ್ಕ ಚಿನ್ನವಾಗಿದ್ದಾಳೆ. ಶಿವಶರಣರ ಮಹಿಮೆ ತಿಳಿಯುವುದು ಬಹುಕಷ್ಟ. ಏಕೆಂದರೆ ಕಬ್ಬಿಣವುಂಡ ನೀರು ನಿರ್ವಯವಾಗುವಂತೆ ಬಿಸಿಲುಂಡ ಅರಿಶಿಣದಂತೆ ಉರಿಯೊಳಗಾದ ಕರ್ಪೂರದಂತೆ ಬಯಲಿನಲ್ಲಿ ಒಂದುಗೂಡಿದ ವಾಯುವಿನಂತೆ – ಸಮರಸಗೊಂಡವನ ಸ್ಥಿತಿ ಅನುಭವಗಮ್ಯವೆ ಹೊರತು ಮಾತಿಗೆ ನಿಲುಕುವುದಿಲ್ಲ. ಅಜಗಣ್ಣನೆ ನೀವಾದ ನಿಮ್ಮ ಮಹಿಮೆ ಹಿರಿದಾದುದು. ನಿಮ್ಮ ಪಾದಪದ್ಮಂಗಳಿಗೆ ನಮೋ ನಮೋ ಮುಕ್ತಾಯಕ್ಕನ ಸಂದೇಹ ಸಂದೋಹಗಳು ಸಂದಿವೆ. ಮೋಡದಂತೆ ಬಂದು ಪಂಜಿನಂತೆ ಕರಗಿವೆ. ಆಕೆಯ ಹೃದಯ ನಿರ್ಮಲವಾಗಿದೆ. ನಿರ್ಭಯವಾಗಿದೆ. ಶರಣರ ಮಹಿಮೆಯನ್ನು ಮಾಲೋಪಮೆಗಳಿಂದ ಮನಂಬುಗುವಂತೆ ಬಣ್ಣಿಸಿದ ಬೆಡಗು ಮುಕ್ತಾಯಿಯದು.

"ಪ್ರಭು ಮುಕ್ತಾಯಕ್ಕರ ಚರ್ಚೆ, ಬುದ್ಧನ ಕಾಲದ ಕಿಸಗೌತಮಿ ಪ್ರಸಂಗವನ್ನು ನೆನಪಿಗೆ ತರುತ್ತದೆ. ಮಡಿದ ಮಗನ ಸಲುವಾಗಿ ಅಲ್ಲಿಯ ವಿಧವೆ ತಾಯಿ ದುಃಖಿಸಿದರೆ ಅಗಲಿದ ಅಣ್ಣನ ಸಲುವಾಗಿ ಇಲ್ಲಿ ಮುಕ್ತಾಯಕ್ಕ ಪ್ರಲಾಪಿಸುತ್ತಾಳೆ. ಸಾವು ಇರದ ಮನೆಯಲ್ಲಿ ಸಾಸುವೆ ಕಾಳನ್ನು ತರಲಾರದ ಆಕೆ ಬುದ್ಧನ ಮಾತಿನ ಸತ್ಯವನರಿಯುತ್ತಾಳೆ. ಅದೇ ರೀತಿ ಅಗಲಿದ ಅಣ್ಣನಿಗಾಗಿ ಪರಿತಪಿಸುತ್ತಿರುವ ಮುಕ್ತಾಯಕ್ಕ, ಪ್ರಭುವಿನ ನಿಜ ನುಡಿಗಳನ್ನು ಬೇರೆ ಬೇರೆ ಹಂತದಲ್ಲಿ ಪ್ರಶ್ನಿಸಿದರೂ ಕೂಡ, ಕೊನೆಗೆ ಸತ್ಯ ಮನವರಿಕೆಯಾದಾಗ ಅಹುದಹುದೆಂದು ಶಿವಶರಣರ ಮಹಿಮೆಯನ್ನು ಅರಿತುಕೊಂಡು ಅಗಲಿದ ಅಣ್ಣನ ದುಃಖದಿಂದ ಬದುಕಿನ ಗೂಢತೆಯ ಸತ್ಯವನ್ನು ಕಂಡುಕೊಳ್ಳುತ್ತಾಳೆ. ಕೂಡುವಿಕೆ ಅಗಲುವಿಕೆ ಆಕಸ್ಮಿಕ ಮತ್ತು ಅನಿವಾರ್ಯ. ಆದರೆ ಸಾಧನೆ ದೊಡ್ಡದು ಪ್ರಯತ್ನ ಮುಖ್ಯವಾದದ್ದೆಂದು ಇಲ್ಲಿ ಸಿದ್ಧಾಂತ ತಿಳಿಸುತ್ತದೆ"[೫]

ಮುಕ್ತಾಯಕ್ಕ ಲೋಕದ ಬಗ್ಗೆ ನಡೆಸುವ ಚಿಂತನೆ ಉದ್ಬೋಧಕವಾದುದು. ಅರಿವನಣಲೊಳಗಿಕ್ಕಿ ಅಗಿವುತ್ತಿದೆ ಮರ್ತ್ಯಲೋಕವೆಲ್ಲವು ಎಂದು ಒಂದೇ ಮಾತಿನಲ್ಲಿ ಜ್ಞಾನ ಮತ್ತು ಮನುಷ್ಯರ ಮಧ್ಯದ ಕಂದಕದ ದುರಂತವನ್ನು ಕಂಡು ದುಃಖಿಸುತ್ತಾಳೆ. ಜ್ಞಾನವನ್ನು ದವಡೆಯಲ್ಲೇ ಇಟ್ಟುಕೊಂಡು ಜನ ಬರಿಯ ಬಾಯನ್ನು ಅಗಿಯುತ್ತಿದ್ದಾರೆ. ಆದರೆ ಜ್ಞಾನ ಅವರ ಭಾಗವಾಗುತ್ತಿಲ್ಲ. ಅಗಿಯುವುದೂ ತಪ್ಪಿಲ್ಲ. ಹಸಿವೂ ಹಿಂಗದು. ಮನುಷ್ಯ ಬೌದ್ಧಿಕವಾಗಿ ಸಂಪಾದಿಸಿದ್ದನ್ನು ಜೀವನಕ್ಕೆ ಅನ್ವಯಿಸಿಕೊಳ್ಳದೇ ಹೋಗಿರುವ ದುರಂತ ಸ್ಥಿತಿಯದು. ಮುಕ್ತಾಯಕ್ಕ ಹೇಗೆ ಒಂದೊಂದು ಮಾತಿನಲ್ಲಿ ಇಡೀ ಲೋಕದ ಕಡೆ ತನ್ನ ದೃಷ್ಟಿ ಹಾಯಿಸಿ ಜೀವನವನ್ನು ಕುರಿತು ಗಂಭೀರವಾಗಿ ಚಿಂತಿಸುತ್ತಾಳೆ ಎಂಬುದಕ್ಕೆ ಅವಳ ಅನೇಕ ವಚನಗಳು ಸಾಕ್ಷಿಯಾಗಿವೆ.

ಮುಕ್ತಾಯಕ್ಕ ಮುಖ್ಯವಾಗಿ ಯಾವುದನ್ನು ಪರೀಕ್ಷಿಸದೆ, ಕೆಣಕದೆ, ಪ್ರಶ್ನಿಸದೆ, ತನಗೆ ಒಪ್ಪಿಗೆಯಾಗದೆ ಅಂಗೀಕರಿಸುವವಳಲ್ಲ. ಅವಳು ಮಾತನಾಡುವಾಗ ಅಲ್ಲಮ ದೊಡ್ಡ ಜ್ಞಾನಿ ತಾನು ಸಣ್ಣವಳು ಹೆಣ್ಣು ಎಂಬ ಯಾವುದೇ ಅಳುಕೂ ಇಲ್ಲ. ಅಲ್ಲಮನನ್ನು ಎಲ್ಲ ವಚನಕಾರರೂ ಗುರು ಸ್ಥಾನದಲ್ಲಿಟ್ಟು ಗೌರವಿಸಿದ್ದಾರೆ. ಆದರೆ ಅವನ ಯೋಗ್ಯತೆಯನ್ನೇ ಶಂಕಿಸಿ ಅವನನ್ನು ಕಡು ಪರೀಕ್ಷೆ ಮಾಡಿ ಅನಂತರ ಗುರುವಾಕ್ಯವೆಂದು ಅವನ ವಾಕ್ಯಗಳನ್ನು ಅಂಗೀಕರಿಸಿದ ವ್ಯಕ್ತಿಯೆಂದರೆ ಬಹುಶಃ ಮುಕ್ತಾಯಕ್ಕ ಒಬ್ಬಳೇ ಎಂದು ಕೆಲವು ಕವಿಗಳ ಅಭಿಪ್ರಾಯವಾಗಿದೆ. ಅಕ್ಕಮಹಾದೇವಿಯ ಭಾವುಕತೆಯಾಗಲಿ ಭಕ್ತಿ ಮಾರ್ಗವಾಗಲಿ ಇಲ್ಲಿಲ್ಲ. ಇವಳದು ಮುಖ್ಯವಾಗಿ ಪ್ರಶ್ನಿಸುವ, ಸವಾಲು ಹಾಕುವ ಒಪ್ಪಿಕೊಳ್ಳಲು ಸಿದ್ಧವಾಗಿರುವ ಮುಕ್ತಮನಸ್ಸು. ಮುಕ್ತಾಯಕ್ಕನಿಗೆ ಭಾಷೆಯ ಸಾಧ್ಯತೆಗಳು ತಿಳಿದಿವೆ. ಅವಳ ಆಲೋಚನೆಯಷ್ಟು ಅವಳ ಭಾಷೆಯ ಸ್ಪಟಿಕದಂತೆ ಸ್ವಚ್ಛ, ಕತ್ತಿಯಂತೆ ತೆಳು, ಆದರೆ ಹರಿತ ಅವಳ ವಚನಗಳಲ್ಲಿ ಆಲೋಚನೆ ಮುಖ್ಯವಾಗಿ, ಕಾವ್ಯತ್ವ ಅದಕ್ಕೆ ಪೋಷಕವಾಗಿದೆ.

ಮುಕ್ತಾಯಕ್ಕ ಮುಕ್ತ ಮನಸ್ಸಿನ ಹಿರಿಯ ಜೀವನ. ಧೈರ್ಯ ಸ್ಥೈರ್ಯಕ್ಕೆ ಇನ್ನೊಂದು ಹೆಸರು. ಈ ಮಾತಿಗೆ ನಿದರ್ಶನವಾಗಿ ಆರೂ ಇಲ್ಲದವಳೆಂದು ಅಳಿಗೊಳಲು ಬೇಡ. ಅಳಿಗೊಂಡಡೆ ಆನು ಅಂಜುವವಳಲ್ಲ; ಶಿವಯೋಗದ ಪರಮಚರಮ ತಂತ್ರಗಳನ್ನು ಅಳವಡಿಸಿಕೊಂಡಿದ್ದ ಮುಕ್ತಾಯಕ್ಕ ಪ್ರಭುದೇವರಿಗೆ ಎದುರಾಗಿ ತನ್ನ ಅಣ್ಣ ಅಜಗಣ್ಣ ಸಾಧಿಸಿದ ನಿಲುಮೆಯನ್ನು ಪ್ರತಿಪಾದಿಸಿದ ಈ ವಚನ ವೈಖರಿ ಪ್ರಬುದ್ಧವಾಗಿದೆ. ಇಲ್ಲಿ ಬಳಸಿಕೊಂಡಿರುವ ಉಪಮೆಗಳು ಕೂಡ ಸಮಯೋಚಿತವಾಗಿವೆ. ಅರ್ಥವತ್ತಾಗಿವೆ.

ಮುಕ್ತಾಯಕ್ಕನ ಕಾವ್ಯಮಯ ಶೈಲಿಗೆ ಉದಾಹರಣೆ:

"ಅಲರೊಳಡಗಿದ ಪರಿಮಳದಂತೆ

ಪತಂಗದೊಳಡಗಿದೆ ಅನಲನಂತೆ.

ಶಶಿಯೊಳಡಗಿದ ಷೋಡಶಕಳೆಯಂತೆ

ಉಲುಹಡಗಿದ ವಾಯುವಿನಂತೆ

ಸಿಡಿಲೊಳಡಗಿದ ಗಾತ್ರದ ತೇಜದಂತೆ

ಇರಬೇಕಯ್ಯಾ ಯೋಗ, ಎನ್ನ ಅಜಗಣ್ಣ ತಂದೆಯಂತೆ!"

ಅಜಗಣ್ಣನ ಸ್ಥಿತ ಪ್ರಜ್ಞತೆಯನ್ನು ಶಿವಯೋಗದ ನಿಲುವನ್ನು ಮುಕ್ತಾಯಕ್ಕ ಅರ್ಥಪೂರ್ಣವಾದ ಪ್ರತಿಮೆಗಳ ಮೂಲಕ ವರ್ಣಿಸಿರುವುದು ಮನೋಜ್ಞವಾಗಿದೆ. 'ಗಾಳಿಯಲ್ಲಿಯ ಪರಿಮಳದಂತೆ, ಶಶಿಯೊಳಡಗಿದ ಷೋಡಶಕಳೆಯಂತೆ ಯೋಗ ಶಕ್ತಿ ಅಜಗಣ್ಣನಲ್ಲಿ ಸುಳಿದೆಗೆದು ನಿಂತಿದೆ ಎಂದು ಪ್ರಭುದೇವರಿಗೆ ಮನವರಿಕೆ ಮಾಡಿ ಕೊಡುವುದನ್ನು ನೋಡಿದರೆ ಮುಕ್ತಾಯಕ್ಕನು ಶಿವಯೋಗದ ತಂತ್ರದಲ್ಲಿ ಪರಿಣಿತಳೆಂಬುದು ವ್ಯಕ್ತವಾಗುತ್ತದೆ.

೧೨ನೇ ಶತಮಾನದ ಶಿವಶರಣೆಯರು ತಮ್ಮ ಸಮಕಾಲೀನ, ಮಹಾಜ್ಞಾನಿಗಳು, ಮಹಾಮಹಿಮಾವಂತರು, ಪ್ರವಾದಿಗಳು ಎಂದು ಕೀರ್ತಿವೆತ್ತ ಪುರುಷ ಶ್ರೇಷ್ಠರನ್ನು ಕೂಡ ಆಧ್ಯಾತ್ಮದ ಚರ್ಚೆಯಲ್ಲಿ ಎದುರಿಸಿ, ನಿರ್ಭಯರಾಗಿ, ಯಥಾರ್ಥಜ್ಞಾನವನ್ನು ಪಡೆದು ಅವರೊಡನೆ ಚರ್ಚೆಗೆ ನಿಲ್ಲುತ್ತಾರೆ. ತಮ್ಮ ಹಿರಿಮೆಯನ್ನು ತೋರಿಸಿ ಕೊಡುತ್ತಾರೆ. ಪುರುಷರಿಂದ ಬಂದ ಬೋಧನೆ, ಜ್ಞಾನವನ್ನು ಸಹಜವಾಗಿ ಸ್ವೀಕರಿಸದೆ, ತಮ್ಮ ಅನುಭಾವದ ಒರೆಗಲ್ಲಿಗೆ ಹಚ್ಚಿ, ಸ್ತ್ರೀ ಸಮಾನತೆಯನ್ನು ಆಧ್ಯಾತ್ಮ ಕ್ಷೇತ್ರದಲ್ಲಿಯೂ ಚಿರಂತನವಾಗಿ ಉಳಿಸಿಕೊಂಡಿದ್ದಾರೆ. ಅದು ಭಾರತ ಇತಿಹಾಸದಲ್ಲಿ ಶರಣೆಯರು ಸಾಧಿಸಿದ ಮಹಾಸಾಧನೆ!

ಅನಂತರ ಮುಕ್ತಾಯಕ್ಕ ಕಲ್ಯಾಣಕ್ಕೆ ಹೋಗಿ ಕೆಲಕಾಲ ಇದ್ದಿರಬಹುದು ಅನಿಸುತ್ತದೆ. ಏಕೆಂದರೆ ಆಕೆಯ ವಚನಗಳಲ್ಲಿ ಕಲ್ಯಾಣ ಶರಣ ಶರಣೆಯರ ಬಗ್ಗೆ ಉಲ್ಲೇಖಗಳು ಬರುತ್ತವೆ. ಅವರೊಡನೆ ಆಕೆಯ ಒಡನಾಟವಿತ್ತೆಂಬುದು ಸ್ಪಷ್ಟವಾಗುತ್ತದೆ.

ಮುಕ್ತಾಯಕ್ಕನು ವಚನಕಾರ್ತಿಯರಲ್ಲಿ ಅಗ್ರಗಣ್ಯಳಾಗಿದ್ದಾಳೆ. ಆಕೆಯ ವಚನಗಳ ಅಂಕಿತ 'ಅಜಗಣ್ಣ ತಂದೆ' ಎಂದು ಇದೆ.

"ಸಿಡಿಲು ಹೊಯ್ದ ಬಾವಿಗೆ ಸೋಪಾನವುಂಟೇ?
ಷಡು ವರ್ಣರಹಿತಂಗೆ ಬಣ್ಣವುಂಟೇ?
ಕಡಲದಾಂಟಿದವಂಗೆ ಹರಿಗೋಲವುಂಟೇ?
ಬಿಡದೆ ಕಟ್ಟಿದ ಒರೆಗೆ ಸಂಧಾನವುಂಟೇ?
ಒಡಲಿಲ್ಲದವಂಗೆ ಒಡವೆಯುಂಟೇ?
ನುಡಿಯುಂಟೇ? ಎಮ್ಮ ಅಜಗಣ್ಣದೇವಂಗೆ?"[೭]

ಈ ಮೇಲಿನ ವಚನದಲ್ಲಿ ಅಜಗಣ್ಣನು ಶಬ್ದ ಮುಗ್ಧ ಎಂಬುದನ್ನು ಮುಕ್ತಾಯಕ್ಕ ಸಹಜವಾದ ಉಪಮಾನಗಳಿಂದ ದೃಢೀಕರಿಸಿದ್ದಾಳೆ. ಬಯಲಲ್ಲಿ ಬಯಲಾದ ಮಹಾಯೋಗಿ ಅಜಗಣ್ಣ. ಸಂಸಾರ ಸಾಗರವನ್ನು ದಾಟಿ ನಿಂತವನು. ಅಂಥವನಿಗೆ ಎಲ್ಲಿಯ ನುಡಿ ಎಲ್ಲಿಯ ಒಡವೆ ಎಂಬುದಾಗಿ ಆತನ ನಿರವಲಯ ಸ್ಥಿತಿಯನ್ನು ವರ್ಣಿಸಿದ್ದಾಳೆ. ಇಲ್ಲಿ ಅಜಗಣ್ಣನ ಬಗೆಗಿರುವ ಆಕೆಯ ಅನನ್ಯ ಸದೃಶ್ಯವಾದ ಅಭಿಮಾನ ವ್ಯಕ್ತವಾಗಿದೆ. ಅಜಗಣ್ಣನನ್ನು ಅರ್ಥಮಾಡಿಕೊಳ್ಳಲು ನಮಗಿರುವ ಏಕಮೇವ ಮಾರ್ಗವೆಂದರೆ ಮುಕ್ತಾಯಕ್ಕನ ವಚನಗಳೆ ಅಂತೆಯೆ ಆಕೆಯ ವಚನಗಳ ಅಂಕಿತ ಅಜಗಣ್ಣ ತಂದೆ.

ಮುಕ್ತಾಯಕ್ಕನ ವಚನಗಳಲ್ಲಿ ಅನುಭಾವವು ಅರಳಿ ಕನ್ನಡದ ವಚನ ಪುಷ್ಪಗಳಾಗಿ ಸುಗಂಧವನ್ನು ಸೂಸುತ್ತಿವೆ.

ಅಣ್ಣ-ತಂಗಿಯರ ಈ ಯೋಗ ಕನ್ನಡ ಸಾಹಿತ್ಯ ಲೋಕಕ್ಕೆ ಒಂದು ಅಪೂರ್ವ ಕೊಡುಗೆ ಆಗಿದೆ. ಅವರಿಬ್ಬರ ವಚನಗಳು ಒಂದಕ್ಕೊಂದು ಪೂರಕವಾಗಿ ನಿಜ ಶಿವಯೋಗವನ್ನು ಸಹಜಯೋಗವನ್ನು ಬಿತ್ತರಿಸುತ್ತವೆ.

> "ಘನ ಮಹಿಮ ಶರಣ ಸಂಗದಿಂದ ಘನಕ್ಕೆ ಘನವೇದ್ಯವಾದ ಬಳಿಕ
>
> ಅರಿಯಲಿಲ್ಲ; ಮರೆಯಲಿಲ್ಲ'
>
> ಕೂಡಲಿಲ್ಲ, ಅಗಲಲಿಲ್ಲ.
>
> ಮನ ಮೇರೆದಪ್ಪಿ ನಿರವಯಲಾದ ಸುಖವ
>
> ಶೂನ್ಯ ನಿಶ್ಶೂನ್ಯವೆಂದು ನುಡಿಯಲುಂಟೆ?
>
> ಶಬ್ದ ಮುಗ್ದವಾಗಿ ಎನ್ನ ಅಜಗಣ್ಣ ತಂದೆಯ ಬೆರಸಿದ ಬಳಿಕ
>
> ಉರಿಯುಂಡ ಕರ್ಪುರದಂತಾದೆನಯ್ಯಾ"[೮]

ಈ ಮೇಲಿನ ವಚನದಲ್ಲಿನ ಸಾರ ಈ ರೀತಿ ಇದೆ. ಮಹಿಮಾವಂತರು ಅನುಭಾವಿಗಳು ಶರಣರು ಅವರ ಅನುಭಾವದಲ್ಲಿ ಮಿಂದೆದ್ದ ಬಳಿಕ ಅರಿಯಲಿಲ್ಲ ಮರೆಯಲಿಲ್ಲ. ಕೂಡಲಿಲ್ಲ ಅಗಲಲಿಲ್ಲ. ನಿರ್ವಯದ ನಿಜದ ಸುಖದ ಸಾಗರದಲ್ಲಿ ತೇಲಾಡುವದೊಂದೆ ಮಾರ್ಗ. ಉರಿವುಂಡ ಕರ್ಪುರದಂತೆ ಅಜಗಣ್ಣ ತಂದೆಯ ಬೆರಸಿದ ಬಳಿಕ ನಾನು ಬೇರೆಯಲ್ಲ ಎಂಬುದರ ಮೂಲಕ ಮುಕ್ತಾಯಕ್ಕನ ಸಂತೃಪ್ತಿ ಇಲ್ಲಿ ವ್ಯಕ್ತವಾಗಿದೆ.

ಬುದ್ಧಿ ಜೀವಿ ಮುಕ್ತಾಯಕ್ಕನ ವಚನಗಳಲ್ಲಿ ಸಾಮಾಜಿಕ, ನೈತಿಕ ವಿಷಯಗಳಿಗಿಂತ ಬೌದ್ಧಿಕ, ತಾತ್ವಿಕ ವಿಷಯಗಳ ಪ್ರತಿಪಾದನೆಯೇ ಹೆಚ್ಚಾಗಿರುವುದು ಕಂಡು ಬರುತ್ತದೆ. ಸುಮ್ಮನೆ ದಿನಕಳೆಯದೆ, ವ್ಯರ್ಥವಾಗಿ ಸಮಯಕಳೆಯದೆ 'ಮಾಡಬನ್ನಿ ದಿನ ಶಿವರಾತ್ರಿಯ ಕೇಳಬನ್ನಿ ಶಿವಾನುಭವವ' ಎಂದು ಶಿವಭಕ್ತರಿಗೆ ನಿತ್ಯ ಶಿವರಾತ್ರಿ ಆಚರಿಸಲು ಸೂಚಿಸಿದ ಮುಕ್ತಾಯಕ್ಕ ಜ್ಞಾನದ ಇಂಗಿತವನ್ನು ಹೀಗೆ ಸ್ಪಷ್ಟಪಡಿಸುತ್ತಾಳೆ.

> "ಸಿಡಿಲು ಹೊಯ್ದ ಬಾವಿಗೆ ಸೋಪಾನವೇಕೊ!
>
> ನೆರೆಯರಿದ ಬಳಿಕ ಮತ್ತೆ ಮತಿ ಹುಟ್ಟಲುಂಟೆ?
>
> ಸೊಡರುಳ್ಳ ಮನೆಗೆ ಮತ್ತೆ ತಮಂಧವೆಂಬುದೇನೊ!
>
> ತನ್ನಲ್ಲಿ ತಾನು ತದ್ಗತವಾದ ಬಳಿಕ
>
> ಬೊಮ್ಮ ಪರಬೊಮ್ಮವಾದೆನೆಂಬುದಿಲ್ಲ ನೋಡಾ
>
> ಎನ್ನ ಅಜಗಣ್ಣ ತಂದೆಗೆ"[೯]

ಈ ವಚನದ ಸಾರ ಸಿಡಿಲು ಹೊಡೆದ ಬಾವಿ ಸುಟ್ಟು ಸೂರೆ ಹೋಗಿದೆ. ಇನ್ನು ಇಳಿದು ಹತ್ತಲು ಸೋಪಾನವೆಲ್ಲಿ? ಸೋಪಾನವುಳಿದ್ದಿದ್ದರೂ ಪ್ರಯೋಜನವಿಲ್ಲ. ಮನೆಯ ದೀಪ ಮನೆಯ ಕತ್ತಲನ್ನೆಲ್ಲ ನುಂಗಿಬಿಟ್ಟಿದೆ. ಕತ್ತಲೆಯ ಮಾತೆಲ್ಲಿ? ಸ್ವಯಂ ಜ್ಞಾನಿ ಪರಿಪೂರ್ಣಯೋಗಿ ಬ್ರಹ್ಮಜ್ಞಾನದ ಅರಿವನ್ನು ಕೊಡದೆ ಹೋದವಲ್ಲ! ಏನೇನೂ ಉಳಿಯದಂತೆ ಅರಿವಿನ ಸಿಡ್ಲು ಹೊಡೆದು ಹೋದ ಅಜಗಣ್ಣನನ್ನು ಕಾಣುವುದೆಂತು? ಅದೇನೋ ಬೆಳಗಿನಲ್ಲಿ ಬೆಳಗು, ಬಯಲಲ್ಲಿ ಬಯಲು ನಿಜಸ್ಥಲದ ನಿಲುವು. ಆ ಬೆಳಗಿನ ಬೆಳಕು ಕಾಣದೆ ಹೋದೆನಲ್ಲ ಎಂಬ ಅಳಲು ಮುಕ್ತಾಯಕ್ಕನದು.

ಅರಿವಿನ ಪೂರ್ಣತ್ವವನ್ನು ಸಂಪಾದಿಸಿಕೊಂಡ ಸಾಧಕನಿಗೆ ಇಹ–ಪರವೆಂಬುದಿಲ್ಲ. ಆತನ ಬದುಕೆಲ್ಲ ಜ್ಯೋತಿರ್ಮಯವಾಗುತ್ತದೆಂಬುದನ್ನು ಹೇಳುತ್ತ, ನಿಜವಾದ ಜ್ಞಾನ ಅವ್ಯಕ್ತವಾಗಿದ್ದು ಅನುಭವಕ್ಕೆ ಮಾತ್ರ ಗೋಚರವಾಗುವಂತಿರಬೇಕು ಎನ್ನುತ್ತಾಳೆ.

ಇನ್ನೊಂದು ವಚನದಲ್ಲಿ, ತನ್ನ ಭಾವಕ್ಕೆ ಗುರುವಾದ ಬಸವಣ್ಣ, ನೋಟಕ್ಕೆ ಲಿಂಗವಾದ ಚೆನ್ನ ಬಸವಣ್ಣ, ಜ್ಞಾನಕ್ಕೆ ಜಂಗಮವಾದ ಪ್ರಭುದೇವ, ಪರಿಣಾಮಕ್ಕೆ ಪ್ರಸಾದವಾದ ಮರುಳ ಶಂಕರದೇವ, ಹೃದಯಕ್ಕೆ ಮಂತ್ರವಾದ ಮಡಿವಾಳಯ್ಯರನ್ನು ಸ್ಮರಿಸುತ್ತಾಳೆ – ಶರಣ, ಲಿಂಗ, ಜಂಗಮ, ಪ್ರಸಾದ ತತ್ತ್ವಗಳನ್ನರಿತು, ಅರಿವು ಸಾಧಿಸಿಕೊಂಡು ನಿಜಪದವನ್ನೈದು ವವರೆಗೂ ಸಾಧಕನಿಗೆ ಗುರುವಿನ ಅವಶ್ಯಕತೆಯಿದೆಯೆಂದು ನಂಬಿದ ಮುಕ್ತಾಯಿ,

"ಗುರು ವಚನದಿಂದಲ್ಲದೆ ಲಿಂಗವನರಿಯಬಾರದು
ಗುರು ವಚನದಿಂದಲ್ಲದೆ ಜಂಗಮವನರಿಯಬಾರದು
ಗುರು ವಚನದಿಂದಲ್ಲದೆ ಪ್ರಸಾದವನರಿಯಬಾರದು
ಗುರು ವಚನದಿಂದಲ್ಲದೆ ತನ್ನ ತಾನರಿಯಬಾರದು
ಹಿಂದಣ ಜನ್ಮದಲ್ಲಿ ಲಿಂಗವ ಪೂಜಿಸಿ ಇಂದು ಜ್ಞಾನೋದಯವಾದಡೆ
ಗುರುವಿಲ್ಲದೆ ಮುನ್ನ ಆಯಿತೆನ್ನ ಬಹುದೆ?
ತನ್ನಲ್ಲಿ ತಾನು ಸನ್ನಹಿತನಾದೆಹೆನೆಂದಡೆ ಗುರುವಿಲ್ಲದೆ ಆಗದು ಕೇಳಾ
ಎನ್ನ ಅಜಗಣ್ಣನೆಂಬ ಗುರುವಿಲ್ಲದೆ
ಆರೂಢಿಯ ಕೂಟ ಸಮನಿಸದು ಕೇಳು".[೧೦]

ಈ ಮೇಲಿನ ವಚನದಲ್ಲಿ ಕಂಡು ಬರುವುದೇನೆಂದರೆ ಮುಕ್ತಾಯಕ್ಕ ಗುರುವಿನ ಅವಶ್ಯಕತೆಯನ್ನು ಈ ವಚನದಲ್ಲಿ ಬಹು ಸುಂದರವಾಗಿ ನಿರೂಪಿಸಿದ್ದಾಳೆ. ಗುರು ಅಜಗಣ್ಣನ ಸಾಮಿಪ್ಯದಿಂದ ಗುರುದರ್ಶನವನ್ನು ಪಡೆದ ಪುನೀತೆ–ಪುಣ್ಯದ ಪುತ್ಥಳಿ–ಗುರುವಿನ ಆಕಸ್ಮಿಕ ಅಗಲುವಿಕೆಯಿಂದ ಕಂಗಾಲಾಗಿ ಮುಕ್ತಾಯಕ್ಕನಿಗೆ ಮುಂದೇನು ಮಾಡಬೇಕೆಂಬುದು ತಿಳಿಯದೆ ಹೋಗಿದೆ. ಪ್ರಭುದೇವರ ಮುಂದೆ ವಾದಕ್ಕಿಳಿದ ಮುಕ್ತಾಯಕ್ಕ ಗುರುವಿನ ಮಹತ್ವವನ್ನು ಎಳೆಎಳೆಯಾಗಿ ಬಿಡಿಸಿದ್ದಾಳೆ. ಗುರುವಿನ ಕೃಪೆಯಿಂದಲೆ ಲಿಂಗ ಪಡೆಯಬೇಕಾಗುತ್ತದೆ. ಆ ಲಿಂಗದ ಮುಖಾಂತರವೆ ಜಂಗಮವನ್ನು ತಿಳಿಯಬೇಕು.

ಪ್ರಸಾದವನ್ನು ಪಡೆಯಬೇಕು. ಗುರುವಿನ ಸನ್ನಿಧಿಯಿಂದಲೇ ಮುಕ್ತಿ. ಅಜಗಣ್ಣನೆಂಬ ಗುರುವಿಲ್ಲದೆ ನಾನು ಆ ಮುಕ್ತಾಯಕ್ಕನನ್ನು ಪಡೆಯುವುದು ಹೇಗೆ? ಲಿಂಗಾಂಗ ಸಾಮರಸ್ಯವನ್ನು ಹೊಂದುವುದು ಹೇಗೆ ಎಂದು ಪ್ರಶ್ನಿಸುತ್ತಾಳೆ.

ತನ್ನ ತಾನರಿಯುವುದುರ ಸಲುವಾಗಿ ಗುರುವಿನ ದೀಕ್ಷೆ ಪಡೆದು, ಸಾಧನೆಯ ಮಾರ್ಗದಲ್ಲಿ ಹೊರಟ ಭಕ್ತನಿಗೆ, ಗುರುವು ಕೊನೆಯವರೆಗೂ ಮಾರ್ಗದರ್ಶಕನಾಗಿರುತ್ತಾನೆ. ಸಾಧಕ ತನ್ನ ತಾನರಿತರೂ ಕೂಡ ಅಲ್ಲಿ ಆ ಅರಿವೇ ಗುರುಸ್ಥಾನದಲ್ಲಿರುತ್ತದೆ. ಅಂದಮೇಲೆ ಸರ್ವ ಸಾಧನೆಗೆ ಗುರುವೇ ಮೂಲ. ಶಿಷ್ಯ, ಗುರುವಿನಿಂದಲ್ಲದೆ ಏನನ್ನೂ ಸಾಧಿಸಲಾರ ಎಂದು, ಗುರು–ಶಿಷ್ಯರ ಸಂಬಂಧವನ್ನು ತನ್ನದೆ ಆದ ರೀತಿಯಲ್ಲಿ ವ್ಯಾಖ್ಯಾನಿಸಿದ್ದಾಳೆ ಮುಕ್ತಾಯಕ್ಕ.

"ಆರು ಇಲ್ಲದವಳೆಂದು ಆಳಿಗೊಳಲುಬೇಡ

ಆಳಿಗೊಂಡಡೆ ಆನು ಅಂಜುವಳಲ್ಲ

ಒಲಿವಿನ ಒತ್ತಿಕಲ್ಲನು ಬೆವರಿಸಬಲ್ಲೆ ಕಾಣಿರೊ!

ಅಪ್ಪಿದವರನಪ್ಪಿದಡೆ ತರಗೆಲೆಯಂತೆ ರಸವನರಸಿದುಂಟೆ,

ಅಜಗಣ್ಣ ತಂದೆ?"[೧೧]

ಮುಕ್ತಾಯಕ್ಕ ಅನುಭಾವಿ ಪರಮಾತ್ಮನ ಸಾಕ್ಷಾತ್ಕಾರ ಪಡೆದ ಸುದೈವಿ. ಅಂತೆಯೆ ಪರಮಾತ್ಮನ ಸತ್ವ ಪರೀಕ್ಷೆಯ ಒರೆಗಲ್ಲಿನಲ್ಲಿ ಹೊರಬಂದ ಚೊಕ್ಕಟ ಚಿನ್ನ. ಅಂತೆಯೆ 'ನೀನು ಬೇಕಾದಷ್ಟು ಕಾಡಿದರೂ ನಾನು ಹೆದರುವಳಲ್ಲ' ಎಂಬ ಆತ್ಮಸ್ಥೈರ್ಯ ಒಡೆವೆರೆದು ಬೆರೆಸಿನಿಂತಿದೆ. ಈ ವಚನದಲ್ಲಿ ಮುಕ್ತಾಯಿಯ ಛಲ ಹೆಡೆಯೆತ್ತಿದೆ. ಯಾರೂ ಇಲ್ಲದವಳೆಂದು ತನ್ನನ್ನು ತಿರಸ್ಕರಿಸಿದರೆ ಕೇಳುವವಳಲ್ಲ, ಅಂಜುವವಳಲ್ಲ ಎಂದು ಹೇಳಿದಲ್ಲಿ, ಶಿವನಿಗೆ ಸವಾಲು ಹಾಕುವ ಆತ್ಮ ವಿಶ್ವಾಸ ಇಲ್ಲಿ ಎದ್ದು ಕಾಣುತ್ತದೆ.

"ನುಡಿಯಲು ಬಾರದು ಕೆಟ್ಟ ನುಡಿಗಳ

ನಡೆಯಲು ಬಾರದು ಕೆಟ್ಟ ನಡೆಗಳ

ನುಡಿದದೇನು ನುಡಿಯದಿರ್ದಡೇನು?

ಹಿಡಿತ ವ್ರತ ಬಿಡದಿರಲು, ಅದೇ ಮಹಾಜ್ಞಾನದಾಚರಣೆ

ಎಂಬೆನು ಅಜಗಣ್ಣ ತಂದೆ"[೧೨]

ಈ ಮೇಲಿನ ವಚನದಲ್ಲಿ ಎಂದೆಂದಿಗೂ ಅಪಶಬ್ದಗಳನ್ನು ನುಡಿಯಬಾರದು. ಇನ್ನೊಬ್ಬರಿಗೆ ಅಹಿತ ಬಯಸಬಾರದು. ಇದೇ ಮಹಾವ್ರತ, ಇದೇ ಮಹಾಜ್ಞಾನ, ಈ ಮಾರ್ಗವನ್ನು ತೋರಿದವನೆ ಅಜಗಣ್ಣ ಎಂದು ಸ್ಪಷ್ಟಪಡಿಸಿದ್ದಾಳೆ. ಅರ್ಥಹೀನವಾದ ರೂಢಿಗಳನ್ನು ತೊಡೆದು ಹಾಕಿ, ಪೂರ್ಣ ಜ್ಞಾನವನ್ನು ಪಡೆಯಬೇಕೆಂದು ಸೂಚಿಸಿದ್ದಾಳೆ.

ಒಟ್ಟಿನಲ್ಲಿ ಮುಕ್ತಾಯಿಯ ಬಗೆಗೆ ಹೇಳುವಾಗ ಅಜಗಣ್ಣನ ಬಗೆಗೂ ಹೇಳಬೇಕು. ಮುಕ್ತಾಯಕ್ಕನೆದುರಿಗಿದ್ದ 'ಜೀವನ' ಸಮಸ್ಯೆ ಜೀವನದ ಸಮಸ್ಯೆ. ವೈದಿಕ ಸ್ತ್ರೀಯರಾದ ಗಾರ್ಗಿ ಮೈತ್ರೇಯಿಯರ ಎದುರಿಗಿದ್ದವೋ ಇಲ್ಲವೊ ನಾವರಿಯವು.

ಅದೇನೇ ಇದ್ದರೂ ಭಾರತದಲ್ಲಿ ಮಹಿಳೆಯರ ಸ್ಥಾನಮಾನಗಳ ಪ್ರಶ್ನೆ ಜಟಿಲವಾಗಿದ್ದಾಗ ಮುಕ್ತಾಯಕ್ಕನಿಗೂ ಪ್ರಭುದೇವನಿಗೂ ನಡೆದ ಸಂಭಾಷಣೆಯಲ್ಲಿ ಅವಳು ತೋರಿದ ಜ್ಞಾನದ ಬೆಡಗು, ಉನ್ನತಿಯ ನಿಲವು ಅಪಾರವಾಗಿವೆ. ಭಾರತದಲ್ಲಿ ಇಂತಹ ಮಹಿಳೆಯರೂ ಇದ್ದರೆಂಬುದಕ್ಕೆ ಇವೆಲ್ಲ ನಿದರ್ಶನಗಳು, ಗಂಡನಿಗಾಗಿ ಸತ್ತವರು, ಮಕ್ಕಳಿಗಾಗಿ ಸತ್ತವರು ಹಲವರಿದ್ದಾಗ ಅಣ್ಣನ ಸಾವಿಗಾಗಿ ಇಷ್ಟೊಂದು ದುಃಖಿಸಿದ ವ್ಯಕ್ತಿಗೆ ಮುಕ್ತಾಯಕ್ಕ ಓರ್ವಳೆ ಸರಿದೊರೆ.

"ಮುಕ್ತಾಯಕ್ಕ ಅಂಗನೆಯರ ಇತಿಹಾಸದಲ್ಲಿಯೇ ಅಪೂರ್ವ ವ್ಯಕ್ತಿ, ಗಾರ್ಗಿಯರ ವಾದಶಕ್ತಿ, ಮಹಾದೇವಿಯ ವಿರಕ್ತಿ, ದ್ರೌಪದಿಯ ಆಗ್ರಜಾನುಶಕ್ತಿ, ಮೈತ್ರೇಯಿಯ ಆತ್ಮದರ್ಶನಶಕ್ತಿ, ಏಕಲವ್ಯನ ಗುರುಭಕ್ತಿಗಳೆಲ್ಲ ಸೇರಿ ಮುಕ್ತಾಯಿಯಾಗಿ ಮೂರ್ತಿಭವಿಸಿದಂತಿದೆ."[೧೩]

## ಕೊನೆ ಟಿಪ್ಪಣಿ


೧. ಮುಕ್ತಾಯಕ್ಕನ ವಚನಗಳು. ಸಂಪಾದಕ: ಪ್ರೊ. ಎಸ್. ಎಸ್. ಭೂಸರೆಡ್ಡಿ. ಡಾ॥ ಮಧು ವೆಂಕಾರೆಡ್ಡಿ. ಪ್ರಕಾಶಕರು; ಬಸವ ಸಮಿತಿ, ಬಸವೇಶ್ವರ ವೃತ್ತ, ಬೆಂಗಳೂರು –೧೯೯೩. ವ. ೨೭. ಪುಟ. ೫೦

೨. ಮುಕ್ತಾಯಕ್ಕನ ವಚನಗಳು. ಸಂಪಾದಕ: ಪ್ರೊ. ಎಸ್. ಎಸ್. ಭೂಸರೆಡ್ಡಿ. ಡಾ॥ ಮಧು ವೆಂಕಾರೆಡ್ಡಿ. ಪ್ರಕಾಶಕರು; ಬಸವ ಸಮಿತಿ, ಬಸವೇಶ್ವರ ವೃತ್ತ, ಬೆಂಗಳೂರು –೧೯೯೩. ವ. ೮. ಪುಟ. ೪೫

೩. ಮುಕ್ತಾಯಕ್ಕನ ವಚನಗಳು. ಸಂಪಾದಕ: ಪ್ರೊ. ಎಸ್. ಎಸ್. ಭೂಸರೆಡ್ಡಿ. ಡಾ॥ ಮಧು ವೆಂಕಾರೆಡ್ಡಿ. ಪ್ರಕಾಶಕರು; ಬಸವ ಸಮಿತಿ, ಬಸವೇಶ್ವರ ವೃತ್ತ, ಬೆಂಗಳೂರು –೧೯೯೩. ವ. ೧೦. ಪುಟ. ೪೫

೪. ಮುಕ್ತಾಯಕ್ಕನ ವಚನಗಳು. ಸಂಪಾದಕ: ಪ್ರೊ. ಎಸ್. ಎಸ್. ಭೂಸರೆಡ್ಡಿ. ಡಾ॥ ಮಧು ವೆಂಕಾರೆಡ್ಡಿ. ಪ್ರಕಾಶಕರು; ಬಸವ ಸಮಿತಿ, ಬಸವೇಶ್ವರ ವೃತ್ತ, ಬೆಂಗಳೂರು –೧೯೯೩. ವ. ೨೦. ಪುಟ. ೪೮

೫. ಅಲ್ಲಮಪ್ರಭು ಮುಕ್ತಾಯಕ್ಕ ಮಹಾದೇವಿಯಕ್ಕಗಳ ವಚನಗಳಲ್ಲಿ ಸೈದ್ಧಾಂತಿಕ ಚರ್ಚೆ. – ಡಾ. ಬಸವರಾಜ ಸಬರದ. ಬಸವಪಥ – ೧೯೯೧. ಪುಟ. ೭

೬. ಮುಕ್ತಾಯಕ್ಕನ ವಚನಗಳು. ಸಂಪಾದಕ: ಪ್ರೊ. ಎಸ್. ಎಸ್. ಭೂಸರೆಡ್ಡಿ. ಡಾ॥ ಮಧು ವೆಂಕಾರೆಡ್ಡಿ. ಪ್ರಕಾಶಕರು; ಬಸವ ಸಮಿತಿ, ಬಸವೇಶ್ವರ ವೃತ್ತ, ಬೆಂಗಳೂರು –೧೯೯೩. ವ. ೩೦. ಪುಟ. ೫೧

೭. ಬಸವಯುಗದ ಶಿವಶರಣೆಯರು. ಸೌ. ಲಲ್ಲೇಶ್ವರಿ ಶಂ. ಮೂಗಿ. ಐ.ಬಿ.ಹೆಚ್ ಪ್ರಕಾಶನ. ಗಾಂಧಿನಗರ. ಬೆಂಗಳೂರು – ೧೯೮೧. ಪುಟ.೨೦೬

೮. ಬಸವಯುಗದ ಶಿವಶರಣೆಯರು. ಸೌ. ಲಲ್ಲೇಶ್ವರಿ ಶಂ. ಮೂಗಿ. ಐ.ಬಿ.ಹೆಚ್ ಪ್ರಕಾಶನ. ಗಾಂಧಿನಗರ. ಬೆಂಗಳೂರು – ೧೯೮೧ ಪುಟ. ೨೦೬

೯. ಶಿವಶರಣರ ವಚನಗಳು.(ಸಮಗ್ರ ಸಂಪುಟ) ಸಂ. ಡಾ. ಆರ್.ಸಿ. ಹಿರೇಮಠ. ಕರ್ನಾಟಕ ವಿಶ್ವವಿದ್ಯಾಲಯ ಪ್ರಕಾಶನ, ಧಾರವಾಡ, ೧೯೬೮ ವಚನ.೧೨೯ಪುಟ ೩೫೨.

೧೦. ಶಿವಶರಣರ ವಚನಗಳು.(ಸಮಗ್ರ ಸಂಪುಟ) ಸಂಪಾದಕ. ಡಾ. ಆರ್.ಸಿ. ಹಿರೇಮಠ. ಕರ್ನಾಟಕ ವಿಶ್ವವಿದ್ಯಾಲಯ ಪ್ರಕಾಶನ, ಧಾರವಾಡ, ೧೯೬೮ ವಚನ.೧೦೯ ಪುಟ ೩೪೩.

೧೧ ಶಿವಶರಣರ ವಚನಗಳು.(ಸಮಗ್ರ ಸಂಪುಟ) ಸಂ. ಡಾ. ಆರ್.ಸಿ. ಹಿರೇಮಠ. ಕರ್ನಾಟಕ ವಿಶ್ವವಿದ್ಯಾಲಯ ಪ್ರಕಾಶನ, ಧಾರವಾಡ, ವಚನ.೧೦೭ ಪುಟ ೩೪೨

೧೨. ಮುಕ್ತಾಯಕ್ಕನ ವಚನಗಳು. ಸಂ: ಪ್ರೊ. ಎಸ್. ಎಸ್. ಭೂಸರೆಡ್ಡಿ. ಡಾ॥ ಮಧು ವೆಂಕಾರೆಡ್ಡಿ. ಪ್ರಕಾಶಕರು; ಬಸವ ಸಮಿತಿ, ಬಸವೇಶ್ವರ ವೃತ್ತ, ಬೆಂಗಳೂರು–೧೯೯೩. ವ. ೧೨. ಪುಟ. ೪೬

೧೩. ಶರಣ ಚರಿತಾಮೃತ – ಪುಟ.೨೬೭.

## ೩ : ಇ. ಗಂಗಾಂಬಿಕೆ

ಗಂಗಾಂಬಿಕೆ ಬಸವಣ್ಣನವರ ಹಿರಿಯ ಪತ್ನಿ. ಬಲದೇವಮಂತ್ರಿಯ ಮಗಳು. ಈಕೆಯ ಕಾಲ ಸುಮಾರು ೧೧೬೦. ಕಳಚೂರ್ಯ ವಂಶದಲ್ಲಿ ಖ್ಯಾತನಾಗಿ ರಾಜ್ಯ ಸ್ಥಾಪನೆ ಮಾಡಿದ್ದ ಪೆರ್ಮಾಡಿಯ ಮಗನೇ ಬಿಜ್ಜಳ. ಇವನು ಬನವಾಸಿ ನಾಡಿನಲ್ಲಿ ಚಾಲುಕ್ಯರಿಗೆ ಮಾಂಡಲಿಕನಾಗಿ ಆಳುತ್ತ ೧೧೫೫ರಲ್ಲಿ ಚಾಲುಕ್ಯ ರಾಜ್ಯವನ್ನು ಆಕ್ರಮಿಸಿ ಸಾಮ್ರಾಟನಾದನು.

"ಬಿಜ್ಜಳನ ತಂದೆ ಪೆರ್ಮಾಡಿ ರಾಜ್ಯವನ್ನಾಳುತ್ತಿದ್ದಾಗ ಬಸವಣ್ಣನ ಸೋದರಮಾವ ಸಿದ್ದಣ್ಣನೇ ದಂಡಾಧಿಪತಿಯಾಗಿದ್ದನೆಂದು ವೀರಶೈವ ಗ್ರಂಥಗಳಲ್ಲಿ ಉಲ್ಲೇಖವಿದೆ"[೧] ಈ ಸಿದ್ದಣ್ಣನ ಮಗಳು ನೀಲಾಂಬಿಕೆ. ಈತನ ಸಹೋದರ ಬಲದೇವನ ಮಗಳು ಗಂಗಾಂಬಿಕೆ.

ಗಂಗಾಂಬಿಕೆ ಬಾಲ್ಯದಲ್ಲಿಯೇ ತಾಯಿಯನ್ನು ಕಳೆದುಕೊಂಡು ತಂದೆ ಬಲದೇವರ ಮತ್ತು ದೊಡ್ಡಪ್ಪ-ದೊಡ್ಡಮ್ಮ ಸಿದ್ಧರಸ-ಪದ್ಮಮ್ಮರ ಪ್ರೀತಿಯ ಆರೈಕೆಯಲ್ಲಿ ಬೆಳೆದಳು. ತನ್ನ ಮಗಳ ಮೇಲಿನ ವಿಶೇಷ ಮಮತೆಯಿಂದ ಬಲದೇವರಸ ಎರಡನೆಯ ವಿವಾಹವನ್ನೇ ಮಾಡಿಕೊಳ್ಳಲಿಲ್ಲ. ತನ್ನ ಏಕಮಾತ್ರ ಪುತ್ರಿ ಗಂಗಾಂಬಿಕೆಯೇ ತನಗೆ ಹೆಣ್ಣು ಸಂತಾನವೂ ಹೌದು ಗಂಡು ಸಂತಾನವೂ ಹೌದು ಎಂದು ಸರಿಯಾದ ಅಕ್ಷರಾಭ್ಯಾಸ, ತಕ್ಕದಾದ ಶಸ್ತ್ರವಿದ್ಯೆ, ಅಗತ್ಯವಾದ ಅಶ್ವಾರೋಹಣ ಯುದ್ಧ ಕಲೆಯನ್ನು ಕಲಿಸಿದನು.

ದೊಡ್ಡಮ್ಮ ಪದ್ಮಮ್ಮಳಿಗೆ ಇನ್ನೂ ನೀಲಾಂಬಿಕೆ ಹುಟ್ಟರದಿದ್ದರಿಂದ ಮಾತೃಪ್ರೇಮವನ್ನೆಲ್ಲಾ ಅವಳು ತನ್ನ ಓರಗಿತ್ತಿಯ ಅಥವಾ ನೆಗೆಣ್ಣಿಯ ಮಗಳಾದ ಗಂಗಮ್ಮಳ ಮೇಲೆಯೇ ಹರಿಸಿದ್ದಳು. ಗಂಗಮ್ಮಳು ಒಂದೆರಡು ವರ್ಷ ತನ್ನ ಮಡಿಲಲ್ಲಿ ಆಡಿದ ಬಳಿಕವೇ ತಾನು ಗರ್ಭಧರಿಸಿದ್ದರಿಂದ ಪದ್ಮಮ್ಮಳು ಆಕೆಯ ಕಾಲುಗುಣದಿಂದ ಧನ್ಯತೆಯನ್ನನುಭವಿಸಿ ಎಲ್ಲಿಲ್ಲದ ಪ್ರೀತಿ ವಾತ್ಸಲ್ಯಗಳನ್ನು ಗಂಗಾಂಬಿಕೆಯ ಮೇಲೆ ತೋರುತ್ತಿದ್ದಳು. ಹೀಗಾಗಿ ಗಂಗಾಂಬಿಕೆ ಮತ್ತು ನೀಲಾಂಬಿಕೆ ದೊಡ್ಡವರಾಗುವವರೆಗೆ ಎರಡು ದೇಹ ಮತ್ತು ಒಂದು ಆತ್ಮ ಎಂಬಂತೆ ಆಟವಾಡಿಕೊಂಡಿದ್ದರು.

ಗಂಗಾಂಬಿಕೆಗೆ ವಿವಾಹ ಯೋಗ್ಯ ವಯಸ್ಸು ಪ್ರಾಪ್ತವಾದ ಕೂಡಲೆ ಬಲದೇವರಸರಿಗೆ ಮೊದಲು ನೆನೆಪಿಗೆ ಬಂದ ವರನೆಂದರೆ ತಮ್ಮ ಏಕಮಾತ್ರ ತಂಗಿ ಮಾದಲಾಂಬಿಕೆಯ ಹಿರಿಯ ಸುಪುತ್ರ ಬಸವರಸನೇ. ಉಪನಯನ ಸಮಾರಂಭಕ್ಕೆ ಬಾಗೆವಾಡಿಗೆ ಹೋದಾಗ ಬಸವಣ್ಣನ ತರ್ಕ-ನಿರ್ಭಿಡೆಯ ಪ್ರಖರ ವಿಚಾರಧಾರೆಗೆ ಮಾರುಹೋದ ಬಲದೇವರಸ ಕೂಡಲ ಸಂಗಮದಲ್ಲಿನ ಆತನ ವಿದ್ಯಾರ್ಥಿ ಜೀವನವನ್ನು ಸೂಕ್ಷ್ಮವಾಗಿ ಗಮನಿಸುತ್ತಿದ್ದನು. ಬಸವಣ್ಣನ ಭಕ್ತಿ, ಜ್ಞಾನ, ಚಿಂತನ, ಆಧ್ಯಾತ್ಮಿಕತೆಗಳು ಅತ್ಯಂತ ಅಭಿಮಾನ ಮೂಡಿಸಿದ್ದವು. "ಮನೆತನದ ಗುರು ಈಶಾನ್ಯ ಗುರುಗಳು ಮತ್ತು ವಿದ್ಯಾಗುರು ಜಾತವೇದ ಮುನಿಗಳನ್ನು

ಮೊದಲು ಸಂಪರ್ಕಿಸಿ ಬಸವಣ್ಣನನ್ನು ಮನೆಯಳಿಯನನ್ನಾಗಿ ಒಪ್ಪಿಸುವಲ್ಲಿ ಯಶಸ್ವಿಯಾದನು". ಹಿರಿಯರಾದ ಸಿದ್ಧರಸರು ಮತ್ತು ಸ್ವತಃ ದೊರೆ ಬಿಜ್ಜಳ ಸಡಗರದಿಂದ ಓಡಾಡಿ ವಿವಾಹವನ್ನು 'ನಭೂತೋ ನ ಭವಿಷ್ಯತಿ' ಎಂಬಂತೆ ನೆರವೇರಿಸಿದರು."[3]

ಮಂಗಳವಾಡದಲ್ಲಿಯೇ ಬಸವಣ್ಣನವರು ತಮ್ಮ ಸ್ವತಂತ್ರ ಪ್ರವೃತ್ತಿಯನ್ನು ಪ್ರಕಟಿಸದೆ ಬಿಡಲಿಲ್ಲ. ಉಂಡುಟ್ಟು ವಿಲಾಸದಿಂದ ಮಂತ್ರಿ ಮಾವನ ಮನೆಯಲ್ಲಿಯಿರಲು ತಯಾರಾಗಲಿಲ್ಲ. ಬಸವಣ್ಣನ ಇಂಗಿತ ತಿಳಿದ ರಾಜ್ಯಾಧಿಕಾರಿ ಸೊಡ್ಡಳ ಬಾಚರಸರು ಲೆಕ್ಕ ವಿಭಾಗದಲ್ಲಿ ಹುದ್ದೆಯೊಂದನ್ನು ಸೃಷ್ಟಿಸಿ ಬಸವಣ್ಣನವರಿಗೆ ಆದಾಯ ಮೂಲ ಕಲ್ಪಿಸಿಕೊಟ್ಟರು. ತನ್ನ ಪತಿಯ ಪ್ರತ್ಯೇಕ ಮನೆಯಲ್ಲಿಯೇ ಗಂಗಾಂಬಿಕೆಯ ದಾಸೋಹ ಕಾರ್ಯ ಆರಂಭವಾಯಿತು.

ಮುಂದೆ ನಾಲ್ಕೈದು ವರ್ಷಗಳಲ್ಲಿಯೇ ಬಿಜ್ಜಳ ಮಂಗಳವಾಡದಲ್ಲಿರುವಾಗಲೇನೇ ಸಿದ್ಧರಸರು ಮತ್ತು ಬಲದೇವರಸರು ಪರಂಧಾಮವನ್ನೈದಿದರು. ಸಿದ್ಧರಸರ ಪತ್ನಿ ಪದ್ಮಮ್ಮ ಮತ್ತು ಮಗಳು ನೀಲಾಂಬಿಕೆಯನ್ನು ಬೇರೆ ಮನೆಯಲ್ಲಿ ವ್ಯವಸ್ಥೆ ಮಾಡದೆ ಬಿಜ್ಜಳ ತನ್ನ ಅರಮನೆಯಲ್ಲಿಯೇ ಇರಿಸಿಕೊಂಡಿದ್ದನು. ಸಹೋದರ ಕರ್ಣಪಾರ್ಯನಂತೂ ತನ್ನ ಸಾಕು ತಾಯಿ ಪದ್ಮಮ್ಮಳನ್ನು ಬಿಟ್ಟು ಇರುತ್ತಿರಲಿಲ್ಲ.

ಸೋದರತ್ತೆ ಪದ್ಮಮ್ಮ ಮತ್ತು ಚಕ್ರವರ್ತಿ ಬಿಜ್ಜಳನ ಜಂಟಿ ಹಿತವಚನಗಳಿಗೆ ಕಟ್ಟು ಬಿದ್ದು ಬಸವಣ್ಣನವರು ನೀಲಾಂಬಿಕೆಯನ್ನು ವರಿಸಬೇಕಾಯಿತು. ಪದ್ಮಮ್ಮಳ ತ್ಯಾಗ, ಮಮತಾ ಜೀವನದಿಂದ ಬಸವಣ್ಣನವರು ಬಹಳ ಪ್ರಭಾವಿತರಾಗಿದ್ದರು. ಇದರಿಂದ ಗಂಗಾಂಬಿಕೆಗೆ ಅಧಿಕ ಖುಷಿಯೇ ಆಗಿತ್ತು. ದೊಡ್ಡಪ್ಪ ಸಿದ್ಧರಸರ ವಾತ್ಸಲ್ಯ ಗುಣಗಳು ಆಕೆಯಲ್ಲಿದ್ದವು. ಕಲ್ಯಾಣ ಕ್ರಾಂತಿಯ ನಂತರ ತನಗೆ ಯುದ್ಧ ಕಲೆ ಗೊತ್ತಿದ್ದುದರಿಂದ ಗಂಗಾಂಬಿಕೆ ವಚನ ಸಾಹಿತ್ಯ ರಕ್ಷಣೆಯ ಶರಣ ಸೇನೆಯೊಡನೆ ಕೂಡಿಕೊಂಡಳು. ಈಗಿನ ಧಾರವಾಡ ಸಮೀಪದ ಕಾದರವಳ್ಳಿಯ ಹತ್ತಿರ ವೀರತನದಿಂದ ಕಾದಾಡಿ ವೀರಸ್ವರ್ಗವನ್ನೈದಿದಳು. ಗಂಗಾಂಬಿಕೆಯ ಸಮಾಧಿ ಘಟಪ್ರಭಾ ನದಿಯ ದಂಡೆ ಮೇಲಿದೆ. ಘಟಪ್ರಭಾ ನೀರು ಸಂಗಮ ಮತ್ತು ತಂಗಡಿಗೆಯನ್ನು ಸೇರುತ್ತದೆ. ಗಂಗಾಂಬಿಕೆಯ ಹೆಸರಿನಲ್ಲಿ ಕೇವಲ ೯ ವಚನಗಳು ಸಿಕ್ಕಿವೆ. ಆಕೆಯ ವಚನಾಂಕಿತ "ಗಂಗಾಪ್ರಿಯ ಕೂಡಲ ಸಂಗಮದೇವ".

ಗಂಗಾಂಬಿಕೆ ಭಕ್ತಿ, ದಾಸೋಹ, ನಿಷ್ಠೆ, ಪತಿಯ ಇಚ್ಛಾನುಸಾರಿಣಿ ಎಂತಲೇ 'ಗಂಗಾಪ್ರಿಯ ಕೂಡಲಸಂಗ' ಎಂದು ತನ್ನ ಪ್ರಿಯ ಪತಿಯ ಆರಾಧ್ಯ ದೈವವೇ ತನ್ನ ದೈವ ಎಂದು ತನ್ನ ಅಂಕಿತದಲ್ಲಿ ಸಮೀಕರಿಸಿಕೊಂಡಳು. ಆಕೆಯ ವಚನವೊಂದರಲ್ಲಿ ಬಸವಣ್ಣನ ಕಾರ್ಯ ವೈಖರಿಯನ್ನು ಕುರಿತ ಅಚ್ಚರಿ ಸ್ಥಾಯಿಯಾಗಿರುವ ಪರಿ ಹೀಗಿದೆ:

"ಸಾಂದ್ರವಾಗಿ ಹಗರಣ ಭಕ್ತಿಯ ಮಾಳ್ಪನೆಂತೊ
ಮಾದಲಾಂಬಿಕಾ ನಂದನನು?
ಸಾಂದ್ರವಾಗಿ ಬಿಜ್ಜಳನರಮನೆಯ ನ್ಯಾಯವನೊಳ್ಪನೆಂತೊ

ಮಾದರಸನ ಮೋಹದ ಮಗನು?
ಸಾಂದ್ರವಾಗಿ ಲಿಂಗಾರ್ಚನೆ ಲಿಂಗ ತೃಪ್ತಿ ಅನುಗೈಯ್ವನೆಂತೊ
ಗಂಗಾಪ್ರಿಯ ಕೂಡಲ ಸಂಗನ ಶರಣ ಚನ್ನಾ?".[೩]

ಈ ಮೇಲಿನ ವಚನದಲ್ಲಿ ಬಸವಣ್ಣನವರ ಜೀವನ ಚರಿತೆಯ ದರ್ಶನ, ಅವರು ತಮ್ಮ ಬದುಕಿನುದ್ದಕ್ಕೂ ಕೈಗೊಂಡ ದಿವ್ಯ ಭಾವದ ಕಾರ್ಯ ವಿಸ್ತಾರ, ಅಲ್ಲದೆ ಅವರು ಸಾಧಿಸಿದ ದಿವ್ಯ ನಿಲುವನ್ನು ಏಕಕಾಲದಲ್ಲಿ ಪರಿಚಯಿಸಿದ್ದಾರೆ. ಐತಿಹಾಸಿಕ ದಾಖಲೆಯೊಳಗೊಂಡಿಹ ಈ ವಚನ, ಅತ್ಯಂತ ಮಹತ್ವಪೂರ್ಣವಾಗಿದೆ.

ಶರಣೆ ಗಂಗಾಂಬಿಕೆಯವರಿಗೆ ತಮ್ಮ ಪತಿ ಬಸವಣ್ಣನವರ ಬದುಕನ್ನು ಅತ್ಯಂತ ಸಮೀಪದಿಂದ ಕಂಡು, ಅವರ ಭವ್ಯ ವ್ಯಕ್ತಿತ್ವವನ್ನು ಅರಿತು, ಆಶ್ಚರ್ಯ, ಆನಂದ ಏಕಕಾಲಕ್ಕೆ ಉಂಟಾಗಿ, ಅದನ್ನು ಈ ರೀತಿ ಹೇಳಿದ್ದಾರೆ. ಮಾದಲಾಂಬಿಕೆಯ ಜೀವನದಲ್ಲಿ ಆನಂದ ತುಂಬಿದ ಹೆಮ್ಮೆಯ ಪುತ್ರ, ಬಸವಣ್ಣನವರು ಇಷ್ಟೊಂದು ಅಚ್ಚುಕಟ್ಟಾಗಿ ದಾಸೋಹಂಭಾವ ಭರಿತರಾಗಿ ಹರಗಣ ಭಕ್ತಿಯನ್ನು ಅದು ಹೇಗೆ ಮಾಡುತ್ತಿರುವರೋ? ಮಾದರಸನ ಮೋಹದ ಮಗನಾದ ಬಸವಣ್ಣನವರು, ಬಿಜ್ಜಳರಾಜನ ಅರಮನೆಯಲ್ಲಿ ನ್ಯಾಯದಾನ ಮಾಡುವ ಕಾಯಕವನ್ನು ಅತ್ಯಂತ ಸಮರ್ಪಕವಾಗಿ ಅದು ಹೇಗೆ ನಿರ್ವಹಿಸುತ್ತಿರುವರೋ? ಇದಕ್ಕೂ ಮಿಗಿಲಾಗಿ, ಆಂತಕ ಸಾಧನೆಗೆ ಪೂರಕವಾದ ಲಿಂಗಾರ್ಚನೆ ಮಾಡುವುದು. ಅದರಿಂದ ಪರಿಪೂರ್ಣವೂ ಪರಮಸತ್ಯವೂ ಆದ ಪರಮಾತ್ಮನಿರವನರಿತು ಆಚರಿಸಿ, ಅನುಭಾವದ ಬೆಳಗಿನಲ್ಲಿ ಲಿಂಗತೃಪ್ತಿ ಹೊಂದಿರುವುದು, ಎಲ್ಲವೂ ದೇವನದೇ ಎಂದು ಪರಮ ಪ್ರಾಸಾದಿಕ ಜೀವನವನ್ನು ನಡೆಸುತ್ತಿರುವುದು ನನಗೇ ಆಶ್ಚರ್ಯವೆನಿಸಿದೆ ಎಂದು ಮೆಚ್ಚುಗೆಯನ್ನು ವ್ಯಕ್ತಪಡಿಸಿದ್ದಾರೆ. ಗಂಗಾಂಬಿಕೆಯವರು ನಿತ್ಯ ನವೀನ ಸತ್ಯದರ್ಶನ ಮಾಡಿಸುವ ಶರಣೆ ಗಂಗಾಂಬಿಕೆಯವರ ವಚನಗಳು ವಿಶಿಷ್ಟ ಶೈಲಿಯಲ್ಲಿವೆ. ಅವರು ತಮ್ಮ ವಚನಗಳ ಮೂಲಕವೇ ಜೀವನ–ಚರಿತೆ–ಚಾರಿತ್ರ್ಯದ ದರ್ಶನವನ್ನು ಮಾಡಿಸಿದ್ದಾರೆ. ಇಲ್ಲಿ ಬಸವಣ್ಣನವರ ಚರಿತ್ರೆಯೊಡನೆ, ಅವರ ಚಾರಿತ್ರ್ಯ, ಕಾರ್ಯ, ವಿಸ್ತಾರವನ್ನು ಪರಿಚಯಿಸುವ ರೀತಿ, ಅತ್ಯಂತ ಮನಮುಟ್ಟುವಂತಿದೆ. ತಮ್ಮ ಪತಿಯ ಹೆಸರನ್ನು ನೇರವಾಗಿ ಹೇಳದೆ, ಅವರ ತಾಯಿ ತಂದೆಯ ಹೆಸರನ್ನು ನಿಖರವಾಗಿ ಹೇಳುತ್ತಿರುವ ರೀತಿ ಸಹಜವಾಗಿದೆ.

ಮಾದಲಾಂಬಿಕಾನಂದ, ಮಾದರಸನ ಮೋಹದ ಮಗನೇ ತನ್ನ ಪತಿ ಎನ್ನುವಲ್ಲಿ ಒಂದು ಬಗೆಯ ಒಗಟಿದೆ. ಇತಿಹಾಸವಿದೆ. ಜೊತೆಗೆ ಗೌರವಾದರಭಾವವೂ ಅಭಿವ್ಯಕ್ತಗೊಂಡಿದೆ. ಇದರಿಂದ ಬಸವಣ್ಣನವರ ಹುಟ್ಟಿನ ಬಗ್ಗೆ ಏಳುವ ನಾನಾ ರೀತಿಯ ಗೋಜಲು–ಗೊಂದಲಗಳಿಗೆ ಸ್ಪಷ್ಟ ಉತ್ತರವೂ ಇದೆ. ಬಸವಣ್ಣನವರು ನಡೆದುಕೊಳ್ಳುತ್ತಿದ್ದರೀತಿ, ಅವರು ಗೈಯುತ್ತಿದ್ದ ಕಾರ್ಯ ವಿಸ್ತಾರದ ಬಗ್ಗೆ ಗಂಗಾಂಬಿಕಾ ತಾಯಿಯವರಿಗೆ ತುಂಬು ಹೆಮ್ಮೆಯಿದೆ. ಅವರು ಇಲ್ಲಿ 'ಸಾಂದ್ರವಾಗಿ' ಎಂಬ ಶಬ್ದವನ್ನು ಮೂರು ಬಾರಿ ಬಳಸಿ, ಸಾಹಿತ್ಯ ಸೌಂದರ್ಯದ ಸೊಬಗನ್ನು ಹೆಚ್ಚಿಸಿದ್ದಾರೆ. ತನ್ನ ಪತಿ, ಕೈಗೊಂಡ ಕಾರ್ಯವೆಲ್ಲವೂ ಸಮರ್ಪಕವಾದುದು, ಸತ್ವ ಪೂರ್ಣವಾದುದು, ಸತ್ಯ ಭರಿತವಾದುದು ಎಂಬುದನ್ನು 'ಸಾಂದ್ರವಾಗಿ' ಎಂಬೀ ಶಬ್ದದಲ್ಲಿ ಹಿಡಿದಿಟ್ಟಿದ್ದಾರೆ. ಇವಿಷ್ಟು ಈ ವಚನದ

ಹೊರಹಂದರವಾದರೆ, ವಚನದೊಳಗೆ ಬಸವಚಂದಿರನ ದಿವ್ಯ ಬೆಳದಿಂಗಳಿನಂತಹ ಶಾಂತ-ಶೀತಲವಾದ, ನಿರ್ಮಲ ಪ್ರೇಮಭರಿತ ವ್ಯಕ್ತಿತ್ವದ ಪರಿಚಯವಿದೆ.

"ಮಡಿವಾಳಣ್ಣಂಗೇಕೆ ಬಾರದವ್ವಾ ಕರುಣಾರಸ?
ಮಡಿವಾಳಣ್ಣಂಗೇಕೆ ಬಾರದವ್ವಾ ಶೌರ್ಯರಸ?
ಮಡಿವಾಳಣ್ಣಂಗೇಕೆ ಬಾರದವ್ವಾ ಅದ್ಭುತರಸ?
ಮಡಿವಾಳಣ್ಣಂಗೇಕೆ ಬಾರದವ್ವಾ
ಗಂಗಾಪ್ರಿಯ ಕೂಡಲಸಂಗನ ಶರಣ ಪ್ರಾಣದಾನರಸ
ಸಿದ್ಧರಾಮಯ್ಯ?".[೪]

ಈ ಮೇಲಿನ ವಚನದಲ್ಲಿ ಶರಣ ಬಂಧುವಾದ ಮಡಿವಾಳ ಮಾಚಿತಂದೆಗೆ ಅದೇಕೆ ಕರುಣರಸ ಚಿಮ್ಮುತ್ತಿಲ್ಲ? ಶರಣರಾದವರಿಗೆ, ಕರುಣೆ ತುಂಬಿದ ಹೃದಯವಿದ್ದು, ಎಲ್ಲರನ್ನೂ ಎಂಥವರನ್ನೂ ಕ್ಷಮಿಸುವ ಶೂರಗುಣವೆಂಬ ಶೌರ್ಯರಸವಿರಬೇಕು. ಆದರೆ, ಅದೇಕೆ ಮಡಿವಾಳಣ್ಣಂಗೆ ಕ್ಷಮಾಭರಿತ ಶೌರ್ಯರಸ ಬರುತ್ತಿಲ್ಲ? ಎಲ್ಲವೂ ಲಿಂಗಯ್ಯನ ಅದ್ಭುತ ಲೀಲಾವಿಲಾಸವೆಂದು ಆಶ್ಚರ್ಯಭಾವ ಭರಿತರಾಗಿ ನೋಡುವ ಅದ್ಭುತರಸ ಮಡಿವಾಳಣ್ಣಂಗೇಕೆ ಚಿಮ್ಮುತ್ತಿಲ್ಲ? ಹೇಳಿ, ಸಿದ್ಧರಾಮಯ್ಯ ಶರಣರೇ! ಪರಮಾತ್ಮನನ್ನು ನೆರೆನಂಬಿದ ಶರಣರಲ್ಲಿ ಸರ್ವಭೂತಹಿತಭಾವದ ಪ್ರಾಣದಾನರಸ ತುಂಬಿರಬೇಕಲ್ಲವೆ? ಎಂದು ಗಂಗಾಂಬಿಕೆಯವರು, ಸಮತಾಯೋಗಿ ಸಿದ್ಧರಾಮಯ್ಯ ಶರಣರಿಗೆ ಪ್ರಶ್ನಿಸುವಂತಿದೆ, ಈ ವಚನ. ಇಲ್ಲಿ ಪರಮ ಕರುಣಾಮೂರ್ತಿಯಾದ ಗಂಗಾಂಬಿಕೆಯವರು, ಸತ್ಯವನ್ನು ಅತ್ಯಂತ ಪ್ರಿಯವಾಗಿ, ಹಿತವಾಗಿ, ಹಾಗೂ ಉದ್ವೇಗ ಉಂಟಾಗದಂತೆ ಹೇಳುತ್ತಿರುವರ ಶೈಲಿ ಮನನೀಯವಾಗಿದೆ.

ಈ ವಚನದಲ್ಲಿ ಶರಣ ಬಂಧು ಮಡಿವಾಳಣ್ಣಂಗೇಕೆ ಕರುಣಾರಸ ಚಿಮ್ಮುವುದಿಲ್ಲ? ಕರುಣೆಯು ದೈವೀಗುಣವಲ್ಲವೆ? ಅದೊಂದು ಬಗೆಯ ನಿರ್ಮಲ ಪ್ರೇಮದ ಭಾವನೆ. ಆ ಭಾವರಸದಿಂದಲೇ ಕ್ಷಮಾಗುಣ ಹೊಮ್ಮುತ್ತದೆ. ಕರುಣರಸ, ವೀರರಸ ಇವೆರಡಕ್ಕಿಂತ ಮಿಗಿಲಾದ ರಸವೇ ಅದ್ಭುತರಸ. ಜಗತ್ತಿನಲ್ಲಿ ನಡೆವ ಸಮವಿಷಯ ಕ್ರಿಯೆಗಳನ್ನು ಶಾಂತವಾಗಿ, ಆಶ್ಚರ್ಯದಿಂದ, ಶಿಶುಭಾವ ತುಂಬಿಕೊಂಡು ನೋಡುವುದೇ ಅದ್ಭುತ ರಸ!

ನಿಜವರಿದ ಶರಣಂಗೆ ಯೋಗ್ಯವಾದ ಆಚರಣೆ ಹೇಗಿರಬೇಕೆಂಬ ಸ್ವತಂತ್ರ ನಿಲುವನ್ನು ಹೊಂದಿರುವ ಗಂಗಾಂಬಿಕಾ ತಾಯಿಯವರಿಗೆ ಮಡಿವಾಳಣ್ಣನ ಬಗ್ಗೆ ಒಂದು ರೀತಿಯ ಕಳಕಳಿಯ ಭಾವವಿದೆ. ವೀರರಿಗೆ ಕ್ಷಮಾಗುಣವೇ ಭೂಷಣವಾದುದಲ್ಲವೇ? ಯಾರು ಯಾವುದೇ ತಪ್ಪು ಮಾಡಿದರೂ ಕ್ಷಮಿಸಿ, ಪ್ರೀತಿಸುವ ಔದಾರ್ಯಗುಣ. ಮಡಿವಾಳಣ್ಣಂಗೇಕೆ ಕರುಣೆಯಾಗಿ ಚಿಮ್ಮುತ್ತಿಲ್ಲ? ಶೌರ್ಯದಿಂದ ಹೋರಾಟ ಮಾಡಿ ಜಯಿಸುವುದಕ್ಕಿಂತ, ಪ್ರೇಮಪೂರ್ವಕವಾಗಿ ತಪ್ಪನ್ನು ಕ್ಷಮಿಸಿ, ಮನಃ ಪರಿವರ್ತಿಸುವುದೇ ಶರಣರಿಗೆ ತಕ್ಕುದಾದ ಶೂರತನ! ಅದೇ ವೀರರಸ.

ಕ್ಷಮಾಗುಣ ಸಂಪನ್ನ ಶರಣರ ಅಂತಃಕರಣದಲ್ಲಿ ಸದೈವವಾಗಿ ಪ್ರಾಣದಾನರಸಭಾವ ತುಂಬಿರಬೇಕು. ಅದೇ ಸುಶ್ರೇಷ್ಠವಾದ ಸರ್ವಭೂತಹಿತಭಾವ. ಭೂತದಯೆ, ಅನುಕಂಪೆ, ಅದೊಂದು ಅದ್ಭುತಗುಣ, ಅದರಿಂದಲೇ ಭಕ್ತನ ಅಂತರಂಗದಲ್ಲಿ ಶಾಂತರಸ ಚಿಮ್ಮುತ್ತದೆ. ಶಾಂತಮನಸ್ಸೇ ಶರಣನ ಸಂಪತ್ತು.

ಶೃಂಗಾರರಸದಾದಿಯಾಗಿ, ಶಾಂತಿಯೆಂಬ ನವರಸಗಳಲ್ಲೆಲ್ಲಾ ಶ್ರೇಷ್ಠವಾದುದು ಶಾಂತರಸ. ಚಿತ್ತವಿಶ್ರಾಂತಗೊಂಡವರ ಸಂಕೇತವೇ ಶಾಂತಿ. ಅದು ಶರಣನ ಲಕ್ಷಣ. ಅದರಿಂದ ಆನಂದ ಪೂರ್ಣಭಾವ ತುಂಬುವುದು. ಪ್ರಶಾಂತರೂಪಿಯಾದ ಶರಣನು ಹೇಗಿರಬೇಕೆಂದರೆ, ತೋರುವ ಜಗತ್ತಿನಲ್ಲಿ ಉಂಟಾಗುವ ಎಲ್ಲ ಅವ್ಯವಸ್ಥೆಗಳ ಹಿಂದೆ, ದಿಟವಾದ ಸುವ್ಯವಸ್ಥೆಯೇ ಇದೆ ಎಂಬುದನ್ನು ಅನುಭವಕ್ಕೆ ತಂದು ಕೊಂಡಿರಬೇಕು. ಆಗುವುದೆಲ್ಲವೂ ಒಳ್ಳೆಯದಕ್ಕೆ, ಆಗುತ್ತಿರುವುದೆಲ್ಲ ಒಳ್ಳೆಯದಕ್ಕೆ ಎಂಬ ನಿಶ್ಚಿಂತನಾಭಾವ ಶರಣನಲ್ಲಿ ಬೆಳೆದು ಬರಬೇಕು. ಇದು, ಅತ್ಯಂತ ವಿಶಿಷ್ಟವಾದ ಮಾನಸಿಕ ಸ್ಥಿತಿ. ಅದೇ ಸಮಚಿತ್ತ, ಶಾಂತಚಿತ್ತ, ಸ್ಥಿರಪ್ರಜ್ಞತ್ವ ಎನಿಸುವುದು.

ಈ ಶಾಂತಗುಣ ನಿರುಪಾಧಿಕ. ಶಾಂತತೆಯಿದ್ದರೆ, ಸರ್ವಭೂತಹಿತಭಾವವು ತಾನೇ ತಾನಾಗಿ ತುಂಬಿಕೊಳ್ಳುತ್ತದೆ. ಇದೇ ಶರಣಭಾವ! ಕೂಡಲಸಂಗನ ಶರಣ ಮಡಿವಾಳಣ್ಣಂಗೆ – ಇಂಥಾ ಪ್ರಾಣದಾನರಸ ಚಿಮ್ಮಬಾರದೇ? ಎಂದು ಸಮತಾಂಯೋಗಿ ಸಿದ್ಧರಾಮಯ್ಯನವರೊಡನೆ ನಿವೇದಿಸಿಕೊಂಡಿದ್ದಾರೆ, ಗಂಗಾಂಬಿಕೆಯವರು.

ಪಾವನ ಮೂರ್ತಿಯಾದ ಈ ತಾಯಿಗೆ, ಆಚಾರದಲ್ಲಿ ಸಮತೋಲನ ಇರಬೇಕೆಂಬುದು ಚೆನ್ನಾಗಿ ತಿಳಿದಿತ್ತು. ಯಾವುದೂ ಅತಿಯಾಗದೆ, ಹಿತಮಿತವಾದ ಆಚರಣೆ ಅತ್ಯವಶ್ಯ! ಶರಣರಿಗೆ ತಕ್ಕುದಾದ ಗಣಾಚಾರವಿರಬೇಕು. ಗಣಾಚಾರವೆಂದರೆ, ಜನ ಸಮೂಹದೊಂದಿಗೆ ಸತ್ಯ ಹಾಗೂ ನ್ಯಾಯಯುತವಾಗಿ ವರ್ತಿಸುತ್ತಾ ಶಾಂತಿಯಿಂದ ಸಹಬಾಳ್ವೆ ಮಾಡುವ ಜೀವನಕಲೆ, ಕ್ಷಮೆ, ನ್ಯಾಯಶೀಲತೆ, ದೃಢತೆ, ಸತ್ಯಪ್ರಿಯತೆ ಇವು ಗಣಾಚಾರಿಯಾದ ಶರಣರಲ್ಲಿರಬೇಕಾದ ಗುಣಸಂಪನ್ನತೆ ಎಂಬುದೇ ಗಂಗಾಂಬಿಕೆಯವರ ನಿಲುವು.

"ಪತಿಯಾಜ್ಞೆಯಲ್ಲಿ ಚರಿಪ ಸತಿಗ್ಯಾಕೆ ಪ್ರತಿಜ್ಞೆಯು?

ಪ್ರತಿಜ್ಞೆಯ ಪತಿಕರದಲ್ಲಿ ಪೋಪದಿರೆ ಯಾತನೆಯಲ್ಲವೇ?

ಇವಳ ಲಿಂಗನಿಷ್ಠೆ – ಇವಳಿಗೆ,

ನಮ್ಮ ನಿಷ್ಠೆ ಪತಿಯಾಜ್ಞೆಯಲ್ಲಿ ಕಾಣಾ

ಗಂಗಾಪ್ರಿಯ ಕೂಡಲಸಂಗಮದೇವಾ."[೫]

ಬಸವಣ್ಣನವರ ನೆರಳಿನಂತೆ ಬಾಳಿ ಬದುಕಿದ ಗಂಗಾಂಬಿಕೆಯವರ ಜೀವನ ಗಂಗೆಯಂತೆ ಪರಮ-ಪಾವನ. ಪತಿನಿಷ್ಠೆ ಹಿಡಿದು ಸಾಗಿದ ಪುಣ್ಯಸತಿಯಾಕೆ. ಬಸವಣ್ಣನವರನ್ನು ಸನ್ಮಾರ್ಗದರ್ಶಕ ಗುರುವೆಂದು ಭಾವಿಸಿ, ಅವರ ಆಜ್ಞಾನುವರ್ತಿಯಾಗಿ ನಡೆದು ಗೃಹಿಣಿ ಎನಿಸಿಹ ಧೀಮಂತೆ! ಪ್ರಸ್ತುತ ವಚನದಲ್ಲಿ, ಪತಿಯಾಜ್ಞೆಯ ಪರಿಪಾಲನೆ, ಪರಮಾನುಭವಪಥವೆಂದು ಭಾವಿಸಿ, ಸಾಗಿದ ಕಾರಣ ಸದಾಚಾರದ ಸ್ಥಿರತೆಯನ್ನಿಲ್ಲಿ ಕಾಣಬಹುದು.

ಗಂಗಾಂಬಿಕೆಗೆ ಬಸವಣ್ಣನವರಲ್ಲಿ ಅಪೂರ್ವ ನಿಷ್ಠೆ. ಅವರು ಹೇಳುವ ಮುನ್ನವೇ, ಅವರ ಮನದಿಂಗಿತವನ್ನು ಅರಿತು ನಡೆವ ಭಾವ! ಅದನ್ನೇ ಈ ವಚನದ ಸಾಲಿನಲ್ಲಿ ಸಹಜವಾಗಿ ಬಿಂಬಿತವಾಗಿರುವುದನ್ನು ಗಮನಿಸಬಹುದು. ಮೊದಲಿಗೆ ಪತಿಸೇವೆ, ಅದು, ಅವರ ನಿಷ್ಠೇ; ಆ ಬಳಿಕ ಲಿಂಗನಿಷ್ಠೆ. ಮೊದಲು, ಜಂಗಮಪೂಜೆ ನಂತರ ಲಿಂಗಪೂಜೆ. ಇದು ಪತಿಯಾಜ್ಞೆ! ಅದರ ಪಾಲನೆಯಲ್ಲಿ ನಡೆದ ಪತಿಭಕ್ತಿ ಸಂಪನ್ನೆ. ಸತ್ಕ್ರಿಯಾಶೀಲಳು. ಗೃಹಿಣಿ ಎನಿಸಿದ್ದ ಗಂಗಾಂಬಿಕೆಯವರಿಗೆ ಮೊದಲು, ಲಿಂಗಪೂಜೆಯನ್ನು ಮಾಡಿಯೇ ತೀರಬೇಕು. ಅದು ಮಾಡಲೇಬೇಕಾದ್ದು ಎಂಬ ಪ್ರತಿಜ್ಞಾಭಾವವಿಲ್ಲ. ಅದನ್ನಿಲ್ಲಿ ಸತಿಗ್ಯಾಕೆ ಪ್ರತಿಜ್ಞೆಯು? ಎಂದು ತನಗೆ ತಾನೇ ಪ್ರಶ್ನಿಸಿ ಕೊಂಡಿದ್ದಾರೆ. ಒಂದು ವೇಳೆ ಅಂಥ ಪ್ರತಿಜ್ಞೆಯನ್ನು ಮಾಡಿ, ಅದನ್ನು ಸಾಧಿಸಲಾಗದೇ ಇದ್ದರೇ, ಮನೋಯಾತನೆ ಕಟ್ಟಿಟ್ಟ ಬುತ್ತಿ. ಪತಿ ಹೇಳಿದ ಕಾರ್ಯಗಳನ್ನು ಮಾಡುವಲ್ಲಿ ವಿಳಂಬವಾದರೆ, ಮಾಡಲಾಗದಿದ್ದರೆ ಅದರಿಂದ ಮತ್ತಷ್ಟು ಯಾತನೆಯಾಗುವುದಿಲ್ಲವೆ? ಇದನ್ನರಿತು ಮೊದಲು ಯಾವುದನ್ನು ಮಾಡಬೇಕಿದೆಯೋ ಅದನ್ನೇ ಮಾಡಿಬಿಡುವುದು ಒಳ್ಳೆಯದೆಂದು ನಿರ್ಧರಿಸಿ, ಸಮಯಕ್ಕನುಸಾರವಾಗಿ ಸೇವೆ ಸಲ್ಲಿಸುತ್ತಿದ್ದ ಕ್ರಿಯಾಮೂರ್ತಿಯಾಗಿದ್ದರು. ಮಾಡುವ ಕ್ರಿಯೆಗಳೆಲ್ಲ ಲಿಂಗಪೂಜೆಯೇ ಅಲ್ಲವೆ? ಉಚಿತವರಿತು ಮಾಡುವ ಸೇವೆಯಲ್ಲಿ ಸೌಭಾಗ್ಯವಿದೆ. ಈ ಸ್ಥಿರ ನಂಬಿಕೆ ಗಂಗಾಂಬಿಕೆಯವರದಾಗಿತ್ತು.

'ಇವಳ ಲಿಂಗನಿಷ್ಠೆ ಇವಳಿಗೆ' ಎಂಬ ಮಾತು 'ಲಿಂಗಪ್ರಾಣೆ' ಎನಿಸಿಕೊಂಡ ಶರಣೆ ನೀಲಾಂಬಿಕೆಯವರನ್ನು ಕುರಿತು ಹೇಳಿದಂತಿದೆ. ಹೊಸದಾಗಿ ಮಹಾಮನೆಗೆ ಬಂದಿರುವ ನೀಲಾಂಬಿಕೆಗೆ 'ಲಿಂಗದಲ್ಲಿ ನಿಷ್ಠೆ ಹೆಚ್ಚು' ಆ ತಾಯಿ ಮಹಾಮನೆಯೊಳಗಣ ಜ್ಞಾನ ಪ್ರಕಾಶ ಮಂಟಪದಲ್ಲಿ ಲಿಂಗಪೂಜಾನಿರತಳಾಗಿರುತ್ತಿದ್ದರು. ಅದನ್ನು ಕಂಡು, ಅನೇಕ ಶರಣರು ಕೊಂಡಾಡುತ್ತಿದ್ದರು. ಅವರಲ್ಲಿರುವ ಲಿಂಗನಿಷ್ಠೆ ಕಂಡು ಗಂಗಾಂಬಿಕೆಗೂ ಸಂತಸ. ಬಸವಣ್ಣನವರ ಲಿಂಗಪೂಜಾ ಸಂಭ್ರಮಕ್ಕೆ ಒಲಿದು ಬಂದ ನೀಲಾಂಬಿಕೆಗೂ ಲಿಂಗನಿಷ್ಠೆಯೇ ಬೆಳೆಯಲಿ ಎಂಬ ಉದಾರಭಾವ ಗಂಗಾಂಬಿಕೆಯದು. ಯಾರಿಗೆ ಯಾವುದರಲ್ಲಿ ನಿಷ್ಠೆಯೋ ಅದನ್ನೆ ಹಿಡಿದು ಸಾಧಿಸುವುದು ಒಳಿತೆಂದು ಅರಿತವರು ಗಂಗಾಂಬಿಕೆ.

ತಾನು ಕೈಗೊಂಡಿರುವ ಜಂಗಮಸೇವೆ ಅದು ಪತಿಯಾಜ್ಞೆ, ಅದನ್ನು ನೆರವೇರಿಸುವುದರಲ್ಲಿಯೇ ಆನಂದವಿದೆ. ಅದೇ ನನ್ನ ಲಿಂಗಪೂಜೆ ಎಂದರಿತು ಅನುಸರಿಸಿದವರು. ಅದನ್ನೇ ಇಲ್ಲಿ "ನಮ್ಮ ನಿಷ್ಠೆ' ಪತಿಯಾಜ್ಞೆಯಲ್ಲಿ ಎಂದು ಹೇಳಿದ್ದಾರೆ". ಇಂಥ ನೈಷ್ಠಿಕ ಬದುಕು. ನನಗೂ ಪ್ರಿಯ. ಪತಿಗೂ ಪ್ರಿಯ-ಲಿಂಗಯ್ಯನಿಗೂ ಪ್ರಿಯವೇ

ಎಂದರಿತು ಸದ್ವಿನಯಶೀಲಳಾಗಿ ಸೇವೆಗೈಯುತ್ತ, ಬಸವಣ್ಣನವರ ಆಚಾರಪತ್ನಿ ಎನಿಸಿಕೊಂಡವರು. ಪತಿಯಾಜ್ಞೆ ಪಾಲನೆಯೇ ಎಲ್ಲ ಪ್ರತಿಜ್ಞೆಗಿಂತ ಮಿಗಿಲಾದುದು ಎಂಬ ಅವರ ಅನುಭವ ಸುಂದರ ಕೌಟುಂಬಿಕ ಜೀವನಕ್ಕೂ ಮಾರ್ಗದರ್ಶನ ಮಾಡುವಂತಿದೆ.

"ನೇತ್ರಮಧ್ಯದಲ್ಲಿ ಸೂಸುವ ತ್ರಿಣೇತ್ರನ ರೂಪವೆ ಸಿದ್ಧರಾಮಯ್ಯನಾದ
ಜಿಹ್ವೆಯಮಧ್ಯದಲ್ಲಿ ಸೂಸುವ ರುಚಿಯೆ ಸಿದ್ಧರಾಮಯ್ಯನಾದ
ಶ್ರೋತ್ರದಲ್ಲಿ ತುಂಬಿ ಪೂರೈಸುವ ಶಬ್ದವೆ ಸಿದ್ಧರಾಮಯ್ಯನಾದ
ಘ್ರಾಣದಲ್ಲಿ ತುಂಬಿತುಳುಕುವ ಮೂರ್ತಿಯೆ ಸಿದ್ಧರಾಮಯ್ಯನಾದ
ತ್ವಕ್ಕಿನಲ್ಲಿ ಅರಿವ ಮೂರ್ತಿಯೆ ಅಚ್ಚೊತ್ತಿದ ಸಿದ್ಧರಾಮಯ್ಯನಾದ
ಇಂತಪ್ಪ ಪರಶಿವಮೂರ್ತಿ ಸಿದ್ಧರಾಮಯ್ಯನ ಪಾದೋದಕವಕೊಂಡು
ಪರವಸ್ತು ನಾನಾದೆ, ಗಂಗಾಪ್ರಿಯ ಕೂಡಲಸಂಗಮದೇವಾ."[೬]

ಈ ವಚನವು ಮೇಲ್ನೋಟಕ್ಕೆ ಶಿವಯೋಗಿ ಸಿದ್ಧರಾಮಯ್ಯನವರ ಇರುವಿಕೆಯನ್ನು ವರ್ಣಿಸುತ್ತಿರುವರೇನೋ ಎನಸಿದರೂ, ಒಳದನಿಯಲ್ಲಿ ಗಂಗಾಂಬಿಕೆಯು ಸಾಧಿಸಿದ ಅತ್ಯುನ್ನತ ಸಾಧನೆಯ ವಿವರವನ್ನೊಳಗೊಂಡಿದೆ. ಇದು ಅತ್ಯಂತ ಮಹತ್ವದ ಸಾಧನೆ. ಪಂಚ ವಿಷಯಗಳೊಡನಿದ್ದು, ವಿಷಯಗಳಿಗೆ ಅಂಟದಿರುವ ವಿಶಿಷ್ಟ ಸಾಧನೆ. ಬಹುಶಃ ಈ ಬಗೆಯ ಸಾಧನೆಯನ್ನು ಶರಣ ಸಿದ್ಧರಾಮೇಶ್ವರರಿಂದ ಗಂಗಾಂಬಿಕೆಯವರು ಅರಿತುಕೊಂಡ ಕಾರಣ ಆ ಶರಣರನ್ನೇ ಸ್ಮರಿಸುತ್ತಾ ತಾವು ಸಾಧಿಸಿದ ಸಾಧನೆಯ ವಿವರವನ್ನು ಅಭಿವ್ಯಕ್ತಿಸಿದ್ದಾರೆ.

ಪಂಚ ಭೂತಾತ್ಮಕವಾದ ಈ ಪ್ರಪಂಚವು ಪಂಚವಿಷಯಗಳ ವಿಸ್ತಾರವೇ ಆಗಿದೆ. ಈ ಪ್ರಪಂಚದ ಪುತ್ಥಳಿಯೆನಿಸುವ ಜೀವರುಗಳೆಲ್ಲ ಪಂಚ ಜ್ಞಾನೇಂದ್ರಿಯಗಳಾದ ನೇತ್ರ, ಜಿಹ್ವೆ, ಶ್ರೋತ, ಘ್ರಾಣ ಮತ್ತು ತ್ವಚೆ ಇವುಗಳಿಂದ ರೂಪ ಪ್ರಪಂಚ, ರುಚಿ ಪ್ರಪಂಚ, ಶಬ್ದ ಪ್ರಪಂಚ, ಗಂಧ ಪ್ರಪಂಚ ಮತ್ತು ಸ್ಪರ್ಶ ಪ್ರಪಂಚದ ಸುಖಾನುಭೂತಿ ಪಡೆಯುವಲ್ಲಿಯೇ ಮನ ಮಗ್ನರಾದವರನ್ನು ಪ್ರಾಪಂಚಿಕರು ಎನ್ನುತ್ತಾರೆ. ಶಿವಯೋಗ ಸಾಧಕರಾದ ತಾಯಿಯವರು, ಪ್ರಾಪಂಚಿಕ ವಿಷಯವರ್ತುಲದಲ್ಲಿ ಸಿಲುಕದೇ ಪ್ರತಿವಿಷಯದ ಹಿಂದಿರುವ ಅಗೋಚರ ಪರಶಿವತತ್ತ್ವವನ್ನು ಅನುಭವಿಸಿ, ಪರವಸ್ತುವೇ ತಾನಾಗಿದ್ದಾರೆ. ಅಂಗೇಂದ್ರಿಯಗಳೆಲ್ಲ, ಲಿಂಗೇಂದ್ರಿಯಳಗಳಾಗಿ ಪರಿಣಮಿಸುವ ಷಟ್‌ಸ್ಥಳ ಸಾಧನೆ ಪ್ರಸ್ತುತ ವಚನದಲ್ಲಡಗಿದೆ.

ಕಂಗಳ ಮೂಲಕ ಕಾಣುವ ಸಮಸ್ತ ರೂಪ ಪ್ರಪಂಚದ ಹಿಂದೆ, ಕಾಣದಂತೆ ಮುಕ್ಕಣ್ಣನೆನಿಸುವ ಪರಶಿವಲಿಂಗವೇ ಇದ್ದು, ಮೂಲ ಕಾರಣವೆನಿಸದೆ ಇದನರಿವ ಪ್ರಜ್ಞೆ ಬಂದಲ್ಲಿ, ಕಾಣುವ ನೇತ್ರ, ಶಾಂತ ಶಿವಲಿಂಗ, ಆರೂಪವೇ ಶಾಂತಮೂರ್ತಿ ಶರಣ ಸಿದ್ಧರಾಮಯ್ಯ. ರುಚಿಸುವ ನಾಲಿಗೆಗೆ ರುಚಿಸಲು ಸಿಗುವ ರಸಪ್ರಪಂಚವೆಲ್ಲಾ ರಸರೂಪಿ ದೇವನ ಅನುಗ್ರಹವೇ ಎಂಬ ಅರಿವಿದ್ದಲ್ಲಿ, ದೇವತತ್ತ್ವದ ರಸಾನುಭೂತಿ ಅನುಭವಕ್ಕೆ ಬಂದಂತೆ, ಆಗ ನಾಲಿಗೆಯೇ ಗುರುಲಿಂಗವಾದಲ್ಲಿ ರುಚಿ ಪ್ರಪಂಚವೂ ಗುರುಲಿಂಗವೇ.

ಕೇಳುವ ಕಿವಿಗಳ ಮೂಲಕ ಪೂರೈಸುವ ಶಬ್ದ ಸುಖದ ಜ್ಞಾನಕ್ಕೆ ದೇವನ ದಿವ್ಯ ನಾದವೇ ಕಾರಣ ಎಂಬರಿವಿನ ಬೆಳಗಿದ್ದರೆ, ಶಬ್ದದೊಳಗಣ ನಿಃಶಬ್ದ ದೇವದರ್ಶನ, ಆಲಿಸಿ, ಪ್ರಸನ್ನತೆ ಪಡೆವ ಕಿವಿಗಳೇ ಪ್ರಸಾದಲಿಂಗ, ಬಾಹ್ಯ ಶಬ್ದ ಪ್ರಪಂಚವೂ ಪ್ರಸಾದಲಿಂಗ. ನಾಸಿಕದ ಮೂಲಕ ಗಂಧ ಪ್ರಪಂಚದ ಅನುಭವ. ಜಗತ್ತಿನ ಎಲ್ಲ ವಸ್ತುಗಳ ಹಿಂದೆ, ಅದರದ್ದೇ ಆದ ವಾಸನೆಯಿದೆ ಪೃಥ್ವಿಯ ತುಂಬ ಗಂಧ ತುಂಬಿ ತುಳುಕಿದೆ. ಅದನ್ನು ಆಘ್ರಾಣಿಸುವ ಮೂಗೇ ಆಚಾರಲಿಂಗ. ಗಂಧ ಪ್ರಪಂಚವೆಲ್ಲವೂ ಆಚಾರಲಿಂಗವೇ. ಅದು ನಿರಂತರ ಕ್ರಿಯಾಶೀಲ. ಈ ಕ್ರಿಯೆಯ ಹಿಂದಿರುವುದೇ ಕಾರ್ಯಕಾರಣ ಮೀರಿದ ಲಿಂಗಮೂರ್ತಿ ಎಂಬ ಪ್ರಜ್ಞಾಬೆಳಗು ತುಂಬಿದರೆ, ಅದುವೇ ಆಚಾರಲಿಂಗ ಭರಿತಭಾವ.

ಚರ್ಮದಿಂದ ರಕ್ಷಣೆ ಹಾಗೂ ಶೀತೋಷ್ಣ ಸ್ಪರ್ಶನದ ಸುಖಾನುಭವ. ಈ ಸ್ಪರ್ಶಸುಖದ ಹಿಂದಿರುವ ವ್ಯಾಪಕ ಶಕ್ತಿಯೇ ಜಂಗಮಲಿಂಗ. ಬಾಹ್ಯದಲ್ಲಿ ವಾಯುತತ್ವವೇ ಜಂಗಮಲಿಂಗ. ಇಂಥಾ ಜಂಗಮಲಿಂಗದ ಪ್ರಜ್ಞೆಯನ್ನನುಭವಿಸಿದ ಅರಿವಿನ ಮೂರ್ತಿ ಸಿದ್ಧರಾಮಯ್ಯನವರು ತೋರಿದ ಪಂಚವಿಷಯಭರಿತ, ಪಂಚಭೂತಾತ್ಮಕವಾದ ಪ್ರಪಂಚದ ಸಂವೇದನೆಗಳಿಗೆಲ್ಲ ಮೂಲಕಾರಣ, ಪರಶಿವಮೂರ್ತಿಯೆನಿಸುವ ಅಗೋಚರ ಪರವಸ್ತು. ಆ ಪರವಸ್ತುವಿನ ಚಿದಂಶವೇ ತಾನೆಂದರಿದು, ಪೂರ್ಣಪ್ರಜ್ಞಾ ಬೆಳಗಿನಲ್ಲಿ ಪರಶಿವಮೂರ್ತಿಯ ಅರಿವನ್ನು ಪಡೆದು, ಪರವಸ್ತು ತಾನಾದೆ ಎನ್ನುತ್ತಾರೆ.

ಸುರೂಪ–ಸುರಸ–ಸುಶಬ್ದ–ಸುಸ್ಪರ್ಶ–ಸುಗಂಧ ವಿಷಯ ಪ್ರಪಂಚವೆಲ್ಲ ಪರಶಿವನ ಪ್ರಸಾದವೆಂದು ಪರಿಭಾವಿಸಿ, ಪರಿಣಾಮ ತೃಪ್ತಿಯನ್ನು ಪಡೆಯುವುದು. ಆಗ ಪರವಸ್ತುವೇ ತಾನೆಂಬ ಪರಮಜ್ಞಾನದ ಪಾದೋದಕ ಲಭಿಸುವುದು. ಇದು ಶರಣ ಸಿದ್ಧರಾಮಯ್ಯನವರು ತೋರಿದ ಪರಮಾನಂದದ ಪಥ! ಈ ಮಾರ್ಗ ಹಿಡಿದ ತಾನು ದಿವ್ಯಾನುಭವವನ್ನು ಪಡೆದಿಹೆ ಎಂಬ ಅನುಭೂತಿ ಗಂಗಾಂಬಿಕೆಗಿದೆ.

> "ಇದೇನೋ, ಮೀರಿ ತೋರುವ ಮೂರುತಿ
> ಪುಷ್ಪಗುಂಪಿನಲ್ಲಿ ಕಾಣದೆ ಹೋಗಿದೆ?
> ಇದೇನೋ, ಮೀರಿ ತೋರುವ ಮೂರುತಿ
> ಕರದಲ್ಲಿಯ ಲಿಂಗದಂತೆ ಉಲುಹದ ಸ್ಥಿತಿ ತೋರುತ್ತಿದೆ?
> ಇಂತಪ್ಪ ಮೂರ್ತಿಯ ಕಂಡು
> ಗಂಗಾಪ್ರಿಯ ಕೂಡಲಸಂಗನ ಶರಣನ ಸತಿಯೊಳು
> ಧನ್ಯಳಾದಳು ಚೆನ್ನಬಸವಣ್ಣಾ." [೭]

ಇದೊಂದು ವಿಶೇಷ ವಚನವೆಂದೇ ಹೇಳಬಹುದು. ಉತ್ಕಟ ಭಕ್ತಿ ಭಾವದಿಂದ ಸಾಗುವ ಲಿಂಗಾಂಗಯೋಗ ಸಾಧನೆ, ಅದರ ಪರಿಣಾಮ ಲಿಂಗದಿರುವನ್ನು ಅನುಭವಿಸಿ ಪಡೆವ ಧನ್ಯತಾಭಾವ! ಆ ಅನುಭವದ ಆನಂದವನ್ನು ಜ್ಞಾನಿ ಚನ್ನಬಸವಣ್ಣನವರಿಗೆ ಹೇಳುತ್ತಿರುವ ರೀತಿ ಅತ್ಯಂತ ವೈಶಿಷ್ಟ್ಯಪೂರ್ಣವಾಗಿದೆ.

ಲಿಂಗಪೂಜೆಯನ್ನು ಮಾಡುವಾಗ ಲಿಂಗಕ್ಕೇರಿಸಿದ ಹೂಗಳಿಂದ, ಲಿಂಗವೇ ಮುಚ್ಚಲ್ಪಟ್ಟು ಕಾಣದಂತಾಗಿದೆ – ಇದು ಸಾಮಾನ್ಯ ಅರ್ಥ. ಆದರೆ, ವಿಶೇಷಾರ್ಥ ಹೀಗಿದೆ:– ಲಿಂಗವೆಂದರೆ, ನಾಮ–ರೂಪ–ಕ್ರಿಯೆ ಮೂರನ್ನೂ ಮೀರಿದ ಮೂರುತಿ. ನಾಮ–ನೇಮಗಳಿಗೆ ಒಳಗಾಗದ ಪರಶಿವ ಸತ್ಯವದು. ಬಾಹ್ಯದ ಎಲ್ಲ ಕ್ರಿಯೆಗಳಿಗೆ ಮೀರಿದ್ದು ಲಿಂಗಪರಮ ಕಾರಣ ತತ್ವವದು! ಹೀಗಿರುವ ಲಿಂಗಕ್ಕೆ ಬಾಹ್ಯದಲ್ಲಿ ಭಿನ್ನವಿಟ್ಟರಸುವ ಭಾವನೆಗಳೇ ತುಂಬಿದ್ದರೆ, ಲಿಂಗದರಿವು ಉಂಟಾಗದು. ಈ ದ್ವಂದ್ವ ಭಾವಕ್ಕೆ ಅದು ನಿಲುಕದು. "ನಾನು ಭಕ್ತನಾಗಿ ಲಿಂಗವನ್ನು ಪೂಜಿಸುವೆ" ಎಂಬ ದೇವಭಕ್ತ ಭಾವನೆಯನ್ನು ಮೀರಬೇಕು. "ಪೂಜಿಸುವ ನಾನು, ಪೂಜಿಸಿಕೊಂಬುದು ಲಿಂಗ" ಎಂಬ ಭಿನ್ನಭಾವದ ಪುಷ್ಪವನ್ನು ಏರಿಸಿದರೆ ಲಿಂಗದಿರವು ಕಾಣದೇ ಹೋಗುವುದು. ಲಿಂಗಪೂಜೆಯಲ್ಲಿ ಕರದ ಲಿಂಗ, ಅರಿವಿನ ಕುರುಹು ಎಂದರಿದು. ಲಿಂಗದಲ್ಲಿ ದೃಷ್ಟಿ–ಪ್ರಾಣ–ಮನವನ್ನು ಸಮೀಕರಿಸಿ ಲಿಂಗವಿಸ್ತಾರವನ್ನು ಅನುಭವಿಸಬೇಕು. ಇದು, ಕುರುಹಿಡಿದು–ಕುರುಹುಗೆಟ್ಟ ಸ್ಥಿತಿ. ಲಿಂಗವ ನೋಡುತ್ತಿರುವೆ ಗ್ರಹಿಸುತ್ತಿರುವೆ ಅನುಭವಿಸುತ್ತಿರುವೆ ಎಂಬೆಲ್ಲ ಭಾವನೆಗಳು ಅಳಿದು, ನಿರ್ಭಾವವಾದಲ್ಲಿ ಲಿಂಗಪ್ರಜ್ಞೆ ಬೆಳಗುವುದು.

ಲಿಂಗ ಬೆಳಗು ಒಂದೇ ಆಗಿ, ಪರಶಿವಲಿಂಗದ ಮಹಾ ಬೆಳಗಿನಲ್ಲಿ ಸಮರಸೈಕ್ಯವಾದ ಬಳಿಕ, ಲಿಂಗವನ್ನು ಕುರಿತು ಏನೆಂದು ಹೇಳುವುದು? ಲಿಂಗದ ಬೆಳಗಿನಲ್ಲಿ ಮನಲೀನವಾಗಿ ಹೋಗಿದೆ. ಅದು, ಕರದಲ್ಲಿಯ ಲಿಂಗದಂತೆ ಉಲುಹಿಲ್ಲದ ನಿಃಶಬ್ದ ಸ್ಥಿತಿಯಲ್ಲಿದೆ. ಸತ್ಯವರಿದ ಸಾಧಕನ ಮನದಲ್ಲೀಗ ಶಬ್ದಗಳೇ ಇಲ್ಲ. ಏನೇನೂ ಹೇಳಲಾಗದ ಮೌನಸ್ಥಿತಿ, ಅದುವೇ ಶಬ್ದ ಮುಗ್ಧತೆ.

ಶಬ್ಧ ಮುಗ್ಧ ಸ್ಥಿತಿಗೊಳಗಾಗಿರುವ ಗಂಗಾಂಬಿಕೆಯವರಲ್ಲಿ ಮಾತಿಗೆ ನಿಲುಕದ ಅವರ್ಣನೀಯ ಆನಂದ. ಇದು, ಲಿಂಗಮೂರ್ತಿಯನ್ನು ಅರಿದು, ಘನಕ್ಕೆ ಘನವಾಗಿಹ ಪರ ಶಿವಲಿಂಗ ಪ್ರಜ್ಞೆಗೆ ಒಳಗಾದ ದಿವ್ಯಾನುಭವ. ಇದರಿಂದ ಗಂಗಾಂಬಿಕೆಗೆ ಧನ್ಯತಾಭಾವ ತುಂಬಿ ಬಂದಿದೆ. ಸರ್ವ ಅಹಂರಹಿತರಾಗಿ, ನಾನೆಂಬ ಸೊಲ್ಲಿಲ್ಲದೆ ಎಲ್ಲವನ್ನೂ ಸಾಕ್ಷೀಭೂತರಾಗಿ ನೋಡುವ ಶೂನ್ಯಸ್ಥಿತಿ ಪ್ರಾಪ್ತವಾಗಿವೆ. ಇದಕ್ಕೆ ಕಾರಣ 'ಗಂಗಾಪ್ರಿಯ ಕೂಡಲಸಂಗನ ಶರಣನ ಸತಿಯಳು' ಅಂದರೆ, ಬಸವಣ್ಣನವರ ಸತಿಯಳಾದ್ದರಿಂದಲೇ, ಅವರು ತೋರಿದ ದಿವ್ಯ ಮಾರ್ಗದರ್ಶನದಂತೆ ನಡೆದು ಕೊಂಡಿದ್ದರಿಂದ ಇದೆಲ್ಲ ಸಾಧ್ಯವಾಗಿದೆ ಚೆನ್ನಬಸವಣ್ಣ, ನಾನೆಷ್ಟು ಧನ್ಯಳು! ಎಂದು ಉದ್ಗರಿಸಿದ್ದಾರೆ.

ಇಲ್ಲಿ ಮತ್ತೊಂದು ಸಂಗತಿಯನ್ನು ಗಮನಿಸಬಹುದು. ಏನೆಂದರೆ ಗಂಗಾಂಬಿಕೆಯವರಲ್ಲಿ ಶರಣಸತಿ ತಾನೆಂಬ ಭಾವಕ್ಕಿಂತ ಮಿಗಿಲಾಗಿ, ಕೂಡಲಸಂಗನ ಶರಣನ ಸತಿಯಳು ತಾನೆಂದು ಹೇಳುವಲ್ಲೇ ಆನಂದವಿದೆ. ಬಸವಣ್ಣನವರಿತ್ತ ನಿರ್ಮಲ ತತ್ವದರಿವನ್ನು ನಿತ್ಯಾಪಾಲಿಸುತ್ತ, ಆ ಮಹಾತತ್ವದ ಮೂಲವರಿದು ಸಾಗಿ, ನಿಸ್ಪೃಹಭಾವದಿಂದ ದಾಸೋಹಭಾವದ ಸೇವೆಗೈಯುತ್ತ – ಭಕ್ತಿಸಾಮ್ರಾಜ್ಯ ಸಮನಾಗಿ ನಿರ್ವಹಿಸಿದ್ದರು.

"ಒಂದು ಹಾಳ ಭೂಮಿಯ ಹುಲಿ ಬಂದು
ಎನ್ನ ಎಳಗರುವ ಭಕ್ಷಿಸಿತ್ತಲ್ಲಾ!
ಆ ಹುಲಿ ಹಾಳಿಗೆ ಹೋಗದು
ಆ ಹುಲಿ, ಎಳೆಗರುವ ಕಂಡು ಜನನಿಯಾಯಿತ್ತು.
ಇದನೇನೆಂಬೆ ಗಂಗಾಪ್ರಿಯ ಕೂಡಲಸಂಗಮದೇವಾ?."[೮]

ಭಕ್ತಿ ಸಾಧನೆಯಿಂದ ಉಂಟಾಗುವ ಭಾವಪರಿವರ್ತನೆಯ ಮಹದುನ್ನತ ಸ್ಥಿತಿಯನ್ನು ಇಲ್ಲಿ ಗಂಗಾಂಬಿಕೆಯವರು, ಬೆಡಗನ್ನು ಬಳಸಿ, ಹೇಳುತ್ತಿರುವ ರೀತಿ ಸೋಜಿಗ ತರುವಂತೆ ಇದೆ.

ಗಂಗಾಂಬಿಕೆಯು ನಿರ್ಮಲ ಪ್ರೇಮದ ಬದುಕಿನಲ್ಲಿ, ಭಕ್ತಿ ಸುಳಿದೆಗೆದು ದಾಸೋಹಂಭಾವದ ಹೆಮ್ಮರವಾಗಿ ಬೆಳೆದು ನಿಂತಿದೆ. ಅದನ್ನಿಲ್ಲಿ ಬೆಡಗಿನ ಭಾಷೆಯಲ್ಲಿ ಹಿಡಿದಿಟ್ಟಿದ್ದಾರೆ. 'ಅಹಂ' ಅಳಿದು ಶಿವೋಹಂಭಾವದಲ್ಲಿ ನಲಿದು, ದಾಸೋಹಂಭಾವದಲ್ಲಿ ಬೆರೆದ ಗಂಗಾಂಬಿಕೆ ಬಸವಣ್ಣನವರ ಮಹಾಮನೆಯ ಮಹಾತಾಯಿಯಾಗಿ ನಿಂದ ನಿಲವಿನ ದರ್ಶನವಿದು. ಸಾಮಾನ್ಯ ಅರ್ಥ:- ಒಂದು ಹಾಳು ಭೂಮಿಯೆಂದರೆ, ಹುಲಿವಾಸಿಸುವ ತಾಣ. ಎರಡು ಎತ್ತರವಾದ ಪರ್ವತದ ಮಧ್ಯೆಯಿರುವ ತಗ್ಗಿನ ಪ್ರದೇಶದಲ್ಲಿನ ಹುಲಿ ವಾಸಿಸುತ್ತದೆ. ಅಲ್ಲಿಂದ ಮೇಲೆ ಬಂದ ಹುಲಿ, ಎಳೆಗರುವನ್ನು ತಿಂದು ಹಾಕಲು ಯತ್ನಿಸಿದೆ. ಇದಾದ ಬಳಿಕ, ಆ ಹುಲಿ 'ಹಾಳಿಗೆ' ಮರಳಿ ಹೋಗುವುದಿಲ್ಲ. ಅಲ್ಲಿ, ಬೇರೇನೋ ಘಟಿಸಿದೆ. ಎಳೆಗರುವನ್ನು ಕಂಡ ಹುಲಿ, ತಾಯಿಯಂತಾಗಿದೆ. ಇದನೇನೆಂದು ಹೇಳುವುದು? ಆಶ್ಚರ್ಯವಲ್ಲವೆ! ಗಂಗಾಪ್ರಿಯ ಕೂಡಲಸಂಗಾ ನೀನೆ ಹೇಳು - ಎಂದಿದ್ದಾರೆ.

ಶರಣೆ ಗಂಗಾಂಬಿಕೆಯವರು, ಪರಮ ಪ್ರೇಮಮೂರ್ತಿಯಾಗಿ, ನಿರ್ಮಲ ನಿಶ್ಚಲ ಚಿತ್ತದಿಂದ ಮಾಡುವ ಕ್ರಿಯೆಗಳೆಲ್ಲ ಭಕ್ತಿಸಾಧನೆ ಎಂದರಿತು, ಭಕ್ತಿಭರಿತ ಬದುಕನ್ನೇ ಹಾಸಿ, ಹೊದ್ದು ಕೊಂಡವರು. ಅವರ ಅಂತರಂಗದ ತುಂಬೆಲ್ಲ, ಭಕ್ತಿಯ ಎಳೆಗರು ನಲಿದಾಡಿಕೊಂಡಿದೆ. ಅವರಲ್ಲಿ 'ಅಹಂ ಭಕ್ತ ನಾನು ನಿತ್ಯ ಭಕ್ತಳು - ಎಂಬ ಭಾವ ಸ್ಥಿರಗೊಂಡಿದೆ. ಇದರಿಂದ, ಅವರಲ್ಲಿ ನಾನು-ನಾನೆಂದು ಕಾಡುವ ಹುಲಿಭಾವದ ಮಾಯಭರಿತ 'ಅಹಂತೆ' ನಷ್ಟವಾಗಿದೆ. ಇದು, ಅಹಂತೆಯೆಂಬ ಹುಲಿ, ಮಧುರ ಭಾವನೆಯ ಭಕ್ತಿಯೆಂಬ ಎಳೆಗರುವನ್ನು ತಿಂದು ಹಾಕಿದ ಪರಿಣಾಮ. ಇದುವೇ ಇಲ್ಲಿ ಉಂಟಾಗಿರುವ ವಿಶೇಷ ಪರಿವರ್ತನೆ. ಅಹಂಭಾವವೆಂಬ ಹುಲಿ, ಅಂತರ್ಮುಖಿಯಾಗಿ ಶಿವಭಾವವಾಗಿ ಪರಿಣಮಿಸಿದೆ.



'ನಾನು - ನಾನೆಂಬ' ಅಹಂಭಾವದ ಹುಲಿ, ಶಿವಭಾವವಾದ ಬಳಿಕ, ಆ ತಾಯಿಯ ಮನ, ಮತ್ತೆ ಪ್ರಾಪಂಚಿಕ ಭಾವಕ್ಕೆ ಹೋಗಲೆಂತು ಸಾಧ್ಯ. ನಶಿಸುವ ಜಗದ ಜೀವನಕ್ಕೆ ಎಂದಿಗೂ ಮೋಹಿತವಾಗದು. ಶಿವಭಾವ - ಭಕ್ತಿರಸದಲ್ಲಿ ಮುಳುಗಿರುವ ಮನಸ್ಸು, ಅದು ಹೇಗೆ ತಾನೇ, ಅಹಂ-ಮಮವೆಂಬ ಎರಡು ಗುಡ್ಡಗಳ ಮಧ್ಯೆ ಇರುವ ತಗ್ಗಿಗೆ ಹೋಗಬಹುದು? ಅದನ್ನೇ ಇಲ್ಲಿ 'ಆ ಹುಲಿ, ಹಾಳಿಗೆ ಹೋಗದು' ಎಂದಿದ್ದಾರೆ.

ಮಾಯಾ ಅಹಂನಿಂದ ಉಂಟಾಗುವ ನಾನು–ನನ್ನದೆಂಬ ದ್ವಂದ್ವವಳಿದು, ಎಲ್ಲವೂ ಶಿವನದೆ ತಾನೇ, ತಾನೂ ಸಹ 'ಶಿವಸ್ವರೂಪಿ' ಎಂಬ ಭಾವ ನೆಲೆಗೊಂಡ ಬಳಿಕ ಮತ್ತೆ ಪ್ರಪಂಚದ ಹಾಳಿಗೆ ಹೋಗಲಾಗದು. ಆದ್ದರಿಂದ, ಅಂತರ್ಮುಖಿಯಾದ ಅಹಂ–ಮಾಯೆಯೇ, ಈಗ ಶಿವಭಾವ ಭಕ್ತಿಭರಿತ, ಎಳೆಗರುವನ್ನು ಪೋಷಿಸುವ ಜನನಿಯಾಗಿ ಪರಿವರ್ತಿತವಾಗಿದೆ. ಇದನ್ನೇ, 'ಮಾಯೆಯೇ ತಾಯಿಯಾಗುವಳು' ಎಂದು ಬಲ್ಲವರು ಹೇಳುತ್ತಾರೆ. ಈ ಶಿವಭಾವವೇ ಮುಂದೆ, ದಾಸೋಹಂಭಾವವಾಗಿ ಪರಿವರ್ತಿತವಾಗಿದೆ. ಇದು ಆಶ್ಚರ್ಯಕರ ಬೆಳವಣಿಗೆ. ಇದನ್ನು ಏನೆಂದು ಹೇಳಲಿ?ಏನನ್ನೂ ಹೇಳಲು ಬಾರದಂಥಾ, ದಿವ್ಯಭಾವವಿದು, 'ಅಹಂಭಕ್ತಃ' ಎಂಬ ಭಾವವು ಸ್ಥಿರವಾಗಿದ್ದರೆ, ಆ ಭಾವವೇ ಶಿವೋಹಂಭಾವದ ತಾಯಿಯಾಗಿ ಪೋಷಿಸುತ್ತದೆ. ಕಡೆಗೆ ಶಿವೋಂಭಾವವು ದಾಸೋಹಭಾವದಲ್ಲಿ ವಿಲೀನವಾಗಿ ಹೋಗುತ್ತದೆ. ಇದು ಭಕ್ತಿಭಾವ ತಂದುಕೊಟ್ಟ ಪರಮಾನಂದದ ನಿಲುವು, ಮಾತಿನಲ್ಲಿ ಹೇಳಲಾಗದ ದಿವ್ಯಸ್ಥಿತಿ.

"ಅವಳ ಕಂದ ಬಾಲಸಂಗ, ನಿನ್ನ ಕಂದ ಚೆನ್ನಲಿಂಗ
ಎಂದು ಹೇಳಿದರಮ್ಮ ಎನ್ನೊಡೆಯರು
ಫಲವಿಲ್ಲದ ಕಂದನಿರ್ಪನವಳಿಗೆ
ಎನಗೆ ಫಲವಿಲ್ಲ, ಕಂದನಿಲ್ಲ
ಇದೇನೋ ದುಃಖದಂದುಗ
ಗಂಗಾಪ್ರಿಯ ಕೂಡಲ ಸಂಗಮದೇವಾ"![೯]

ಮಹಾನುಭಾವ ಬಸವಣ್ಣನವರ ಪ್ರಥಮ ಪತ್ನಿ ಗಂಗಾಂಬಿಕೆಯು ಈ ವಚನದ ಮೂಲಕ ಬಸವಣ್ಣನವರ ಮಹಾಮನೆಯ ಒಂದು ಸುಂದರ ಮಧುರ ಭಾಂದವ್ಯದ ಚಿತ್ರಣವನ್ನು ನೀಡುವಂತಿದೆ. ಬಸವಣ್ಣನವರ ಸೋದರ ಮಾವಂದಿರಾದ ಬಲದೇವರಸರು(ಗಂಗಾಂಬಿಕೆಯ ತಂದೆ) ಮತ್ತು ಅವರ ಪತ್ನಿ ಹಾಗೂ ಮತ್ತೊಬ್ಬ ಸೋದರ ಮಾವಂದಿರಾದ ಸಿದ್ಧರಸರು (ನೀಲಾಂಬಿಕೆಯ ತಂದೆ) ಮತ್ತು ಅವರ ಪತ್ನಿ ಕಲ್ಯಾಣದಲ್ಲಿ ಬಹುಬೇಗ ಕಾಲವಶರಾದುದರಿಂದ ಮಹಾಮನೆಯಲ್ಲಿ ವಾಸಿಸುವವರೆಂದರೆ ಗಂಗಾಂಬಿಕೆ, ಎರಡನೆಯ ಪತ್ನಿ ನೀಲಾಂಬಿಕೆ, ಬಸವಣ್ಣನವರ ಸೋದರಿ ಅಕ್ಕನಾಗಲಾಂಬಿಕೆ, ನಾಗಲಾಂಬಿಕೆಯ ಪುತ್ರ ಚೆನ್ನಬಸವಣ್ಣ ಮತ್ತು ಏಕಮಾತ್ರ ಮಗು ಬಾಲಸಂಗಯ್ಯ. ಇವರು ಆರು ಜನ ಆರು ದೇಹ ಆತ್ಮ ಒಂದೇ ಎಂಬಂತೆ ಕರುಳು ಕಕ್ಕುಲತೆಯಿಂದ ಜೀವಿಸುತ್ತಿದ್ದರೆಂಬುದನ್ನು ಈ ವಚನ ಸ್ಫುರಿಸುತ್ತದೆ.

ಬಸವಣ್ಣನವರ ಏಕಮಾತ್ರ ಮಗ ಬಾಲಸಂಗಯ್ಯ ಗಂಗಾಂಬಿಕೆಯ ಪುತ್ರನೋ ಅಥವಾ ನೀಲಾಂಬಿಕೆಯ ಪುತ್ರನೋ ಎನ್ನುವುದಕ್ಕೆ ಕಾವ್ಯಗಳಲ್ಲಿ ಒಮ್ಮತವಿಲ್ಲ. ಕಾರಣವೆಂದರೆ ಉಭಯರೂ ಮಗುವನ್ನು ಪರಪುಟ್ಟನೆಂಬಂತೆ ಕಾಣುತ್ತಿರಲಿಲ್ಲ. ನನ್ನ ತಿಳಿವಳಿಕೆಯ ಪ್ರಕಾರ ಬಾಲಸಂಗಯ್ಯನನ್ನು ಗರ್ಭಧರಿಸಿ ಹೆತ್ತವಳು ಗಂಗಾಂಬಿಕೆ; ಆದರೆ ಮುದ್ದಿನಿಂದ ಲಾಲನೆ ಪಾಲನೆ ಮಾಡಿದವಳು ನೀಲಾಂಬಿಕೆ. ಬಾಲಸಂಗಯ್ಯ ಮಲತಾಯಿಯೂ, ತಾಯಿಯ ತಂಗಿಯೂ ಆಗಿದ್ದ ನೀಲಾಂಬಿಕೆಯ ಅಥವಾ ನೀಲಲೋಚನೆಯ ಜೀವ

ಜೀವಾಳುವಾಗಿದ್ದನು. ಹೆತ್ತ ತಾಯಿಯನ್ನು ಮರೆತು ಚಿಕ್ಕಮ್ಮಳನ್ನೇ ಸರ್ವಸ್ವವೆಂದು ಭಾವಿಸಿದ್ದನು. ದೊಡ್ಡ ಮನೆತನದ ಕೂಸುಗಳಿಗೆ ವಯಸ್ಸು ಮೂರು ನಾಲ್ಕು ವರ್ಷಗಳೇ ಆದರೂ ಹೆತ್ತಮ್ಮಳಂತೂ ಹೆತ್ತಮ್ಮಳಾಗಿ ಇರುತ್ತಾಳೆ; ರಕ್ತ ಸಂಬಂಧ ಅವಿನಾಶಿಯಾದುದು, ಚಿಕ್ಕಮ್ಮಳನ್ನು ಪ್ರೀತಿಸುವುದು, ಅವಳ ಅಪುತ್ರಕ ಭಾವನೆಯನ್ನು ಹೋಗಲಾಡಿಸುವದು ತನ್ನ ಕರ್ತವ್ಯವೆಂಬ ಪ್ರಜ್ಞೆ ಜಾಗ್ರತವಾಗಿರುತ್ತದೆ. ನವಜಾತ ಶಿಶು ಮೀನಿಗೆ ಈಜು ಬರಬಹುದಾದರೆ ಮಿದುಳು ಹೊಂದಿದ ಕೂಸಿಗೆ ಇಂಥ ಭಾವನೆ ಬರುವುದು ಸಾಧ್ಯವೇ ಎಂದು ಅನುಮಾನ ಪಡುವ ಕಾರಣವೇ ಇಲ್ಲ. ಬಾಲಸಂಗಯ್ಯ ಮತ್ತು ನೀಲಾಂಬಿಕೆಯ ನಡುವೆ ಎಂತಹ ಅನ್ಯೋನ್ಯ ಮಮತೆ–ವಾತ್ಸಲ್ಯ ಉಂಟಾಗಿತ್ತೆಂದರೆ ನೀಲಾಂಬಿಕೆ ತನ್ನ ವಚನಾಂಕಿತವಾಗಿ "ಸಂಗಯ್ಯ" ಎಂಬುದನ್ನು ಇರಿಸಿಕೊಂಡಿದ್ದಳು. ಅದು ತಮ್ಮ ಮನೆತನದ ಆರಾಧ್ಯ ದೈವ ಕೂಡಲ ಸಂಗಮ ದೇವರ ಹೆಸರೂ ಆಗಿದೆ; ತನ್ನ ಅನನ್ಯಕಂದ ಬಾಲಸಂಗಯ್ಯನ ಹೆಸರೂ ಆಗಿದೆ.

ಇಂಥ ಅವರ್ಣನೀಯ ಸನ್ನಿವೇಶದಲ್ಲಿ ಗಂಗಾಂಬಿಕೆ ಫಲ ಪಡೆದೂ ಪರದೇಶಿತನ ದುಃಖವನ್ನು ಬಲ್ಲವರು ಮಧುರವೇದನೆ ಅಥವಾ ಸಿಹಿಯಾದ ನೋವು ಎಂದು ಕರೆದಿದ್ದಾರೆ. ಇಂತಹ ದುಃಖದಲ್ಲಿ ಆನಂದವೂ ಇರುತ್ತದೆ, ಹತಾಶೆಯೂ ಇರುತ್ತದೆ. ಅದು ವೇದನೆಯೆಂದರೆ ವೇದನೆ; ಉಲ್ಲಾಸವೆಂದರೆ ಉಲ್ಲಾಸ, ಚಿತ್ತ ವಿಹ್ವಲಗೊಳಿಸವ ಕಾರ್ಯವದು.

ಹೀಗೆ ಒಮ್ಮೆ ಆ ತಾಯಿ ಗಂಗಾಂಬಿಕೆ ಅನ್ಯಮನಸ್ಕಳಾಗಿ ಕುಳಿತಾಗ ಪತಿದೇವ ಬಸವಣ್ಣ ಗಮನಿಸಿರಬೇಕು. ಎರಡು ಮೂರು ದಿವಸಗಳಿಂದ ಬಾಲಸಂಗಯ್ಯ ತನ್ನ ಮಡಿಲಿನ ಕಡೆಗೆ ಸುಳಿದೇ ಇಲ್ಲ ಎಂಬ ದುಮ್ಮಾನ ಹೇಳಿಕೊಂಡಾಗಲಂತೂ 'ಬಾಲಸಂಗಯ್ಯ' ನೀಲಾಂಬಿಕೆಯ ಮಗುವಾಗಿಯೇ ಇರಲಿ, ನೀನು ಸೋದರಳಿಯ ಚೆನ್ನ ಬಸವಣ್ಣನಲ್ಲಿ ನಿನ್ನ ಮಾತೃ ಹಂಬಲವನ್ನು ಪೂರೈಸಿಕೋ, ನಿನ್ನ ಖಾಸ ಮಗ ಚೆನ್ನಬಸವನೇ' ಎಂದು ಸಾಂತ್ವನ ಹೇಳಿರಬೇಕು.

ಚೆನ್ನ ಬಸವಣ್ಣ ನಾಗಲಾಂಬಿಕೆಯ ಹೊಟ್ಟೆಯ ಮಗುವಾದರೂ ಆತ ಬೆಳೆದುದು ಗಂಗಾಂಬಿಕೆ–ನೀಲಾಂಬಿಕೆರ ಕೈ ತುತ್ತಿನಿಂದ, ಎತ್ತಿದವರ ಕನ್ನಡಿಯಾಗಿ ಕಲ್ಯಾಣದ ಬಸವ ಮಹಾಮನೆಯಲ್ಲಿಯೇ. ಆದರೂ ಬಸವಣ್ಣನವರು ಗಂಗಾಂಬಿಕೆಯನ್ನು ಮುದಗೊಳಿಸುವ ಹದವಾಗಿ ಉತ್ಸಾಹಗೊಳಿಸುವ ಚತುರತೆಯಾಗಿ ಆ ಮಾತನ್ನು ಹೇಳಿದ್ದರು. ಆದರೆ ಚೆನ್ನಬಸವಣ್ಣ ಸಾಮಾನ್ಯ ಕೂಸಿನಂತೆ ವರ್ತಿಸುವ ಬಾಲಕನಾಗಿದ್ದನೆ? ಇದು ಗಂಗಾಂಬಿಕೆಯ ಸಂದಿಗ್ದತೆ.

ಬಸವಣ್ಣನವರೇ ತಮ್ಮ ಒಂದು ವಚನದಲ್ಲಿ ಉದ್ಗರಿಸಿದ ರೀತಿಯಲ್ಲಿ ಚೆನ್ನಬಸವಣ್ಣ ಅಂಥಿಂಥ ಮಗುವಾಗಿರಲಿಲ್ಲ. ಬಿತ್ತದೆ ಬೆಳೆಯದೆ ಬೆಳೆದ ಹೆಬ್ಬೆಳಸಿನ ರಾಶಿ ಆತ. ತುಳಸಿ, ದವನ, ಮರುಗಗಳು ಹುಟ್ಟುತ್ತಲೇ ಪರಿಮಳ ಎಂತಹ ಲಲ್ಲೆ ಮಾತುಗಳನ್ನು ಆಡಬೇಕು. ಎಂತಹ ತೊದಲು ನುಡಿಗಳನ್ನು ಆಲಿಸಿ ಸಂತೋಷಪಡಬೇಕು? ಚೆನ್ನಬಸವಣ್ಣನ ಬಾಲ ಲೀಲೆಗಳನ್ನು ತೋರಿದಾಗ ಮಾತ್ರ ಹೃದಯದ ಹಿಗ್ಗು ಹಿರಿಮೆಗಳನ್ನು ಮೆರೆಯಬಹುದಾಗಿತ್ತು. ಅದಂತೂ ಸಾಧ್ಯವಿರಲಿಲ್ಲ. ಅದಕ್ಕಾಗಿಯೇ ಗಂಗಾಂಬಿಕೆಯ ಕೊರಗು ಏನೆಂದರೆ ತಂಗಿ

ನೀಲಾಂಜಿಕೆಗೆ ಫಲವಿಲ್ಲದೆ ಕಂದ ದೊರಕೊಂಡಿದ್ದಾನೆ. ತನಗೆ ಫಲವೂ ಇಲ್ಲ, ಕಂದನೂ ಇಲ್ಲ. ಅವಳ ನೋವು ಕೂಡಲಸಂಗಮ ದೇವರಿಗೆ ಮಾತ್ರ ಅರ್ಥವಾಗಬೇಕು. "ಅದು ತಿಳಿಸುವ ಮಾತಲ್ಲ: ತಿಳಿಸದೆ ತಿಳಿಯುವ ಮಾತು."

> "ನಮ್ಮಯ್ಯನ ಮನದಲ್ಲಿ, ಮಾತಿನಲ್ಲಿ ಸೂಸುವ ಮೂರ್ತಿ
> ನೋಡನೋಡುತ್ತ ಬಯಲಾಯಿತ್ತಲ್ಲಾ!
> ಇದು ಅಲ್ಲಮಯ್ಯ ಮಾಡಿದ ಬೇಟ
> ಹೋದುದು ನಿಶ್ಚಯವಾದಡೆ, ಕರುಳು ಕಳವಳಿಸುತ್ತಿದ್ದವು
> ಇಂತಪ್ಪ ಕಂದ ಪೋದಡೆಯೂ ಪೋಗಿಲ್ಲ.
> ಗಂಗಾಪ್ರಿಯ ಕೂಡಲಸಂಗನ ಶರಣರ
> ಮಾಲೆಯನುಂಬುದಕ್ಕೆ ಬಾರ, ಕೇಳಾ ಚೆನ್ನಬಸವಣ್ಣ."೧೦

ಈ ವಚನದಲ್ಲಿ, ಬಸವಣ್ಣನವರು ತೋರಿದ ಲಿಂಗಭಕ್ತಿಯ ಸುಪಥದ ಸೊಬಗನ್ನು ವಿವರಿಸುತ್ತಾ, ಅಲ್ಲಮ ಪ್ರಭುದೇವರು ತೋರಿದ ಬಯಲಭಾವ ಪಡೆವ ಬಯಲ ಪ್ರೇಮದ ಭಕ್ತಿ ಸಾಧನೆಯನ್ನು ಮೇಳೈಸಿ, ಗಂಗಾಂಬಿಕೆಯವರು ಹೇಳಿರುವಂತಿದೆ. ಪರಮ ಸತ್ಯದಭವಕ್ಕೆ ಭಕ್ತಿಯೇ ಬಹು ಅಮೂಲ್ಯ ಸಂಪತ್ತು 'ಭಕ್ತಿ'ಯೆಂದರೆ, ಪರಮಪ್ರೇಮ. ಯಾವುದು ಆತ್ಯಂತಿಕ ಸತ್ಯವೋ, ಅದನ್ನು ಅನುಭವಿಸಲು ಪರಿಶುದ್ಧವೂ- ಪ್ರೇಮಭರಿತವಾದ ಹೃದಯವಿರಬೇಕು. ಆಗ ಮಾತ್ರದೇವಸತ್ಯದಿರುವು ಅನುಭವಿಸಲು ಸಾಧ್ಯ.

ನಮ್ಮಯ್ಯ ಬಸವಣ್ಣನವರ ಮನದಲ್ಲಿ ಜಗದೊಡೆಯನ ಬಗೆಗೆ ಕರಸ್ಥಲಲಿಂಗದ ಕಲ್ಪನೆ ಮೂಡಿಬಂತು. ಅವನ್ನು ಮಾತಿನಲ್ಲಿ ಸೂಸುವ ಮೂರ್ತಿಯೆನಿಸುವ ಷಡಕ್ಷರಮಂತ್ರವಾಗಿ ಬಳಸಿ, ಲಿಂಗಾನುಸಂಧಾನಗೈಯುತ್ತ, ಸಾಧನೆಗೆ ತೊಡಗಿದೆ, ದೃಷ್ಟಿಯಲ್ಲಿ ಲಿಂಗ, ವಾಕ್ಕಿನಲ್ಲಿ, ಮಂತ್ರ-ಮನಸ್ಥಲದಲ್ಲಿ ಮಂತ್ರಮೂರ್ತಿಯ ಭಾವವಿಸ್ತಾರದ ಕಲ್ಪನೆಮಾಡಲು, ಲಿಂಗನೋಡ ನೋಡುತ್ತಿದ್ದಂತೆ ಬಯಲಾಗಿದೆ. ಇದೇನಾಶ್ಚರ್ಯ! ಕರಸ್ಥಸಲದಿಂದ ಭಾವ, ಬಯಲಾಗಿ ಹೋಗಿದೆ. ಬಯಲ ಲಿಂಗದ ಭಾವ-ನಿಶ್ಚಯವಾಗಿದೆ. ನಿರಾಕಾರ ದೇವನ ಶಬ್ದರೂಪಿಮಂತ್ರ 'ನಮಃ ಶಿವಾಯ ಓಂ' ಎಂಬ ಉದ್ದರಣ ಮಂತ್ರವಾಗಿ 'ನ' ಕಾರ ಪ್ರಣವದ ಪೃಥ್ವಿ 'ಮ' ಕಾರ ಇವೆಲ್ಲಕ್ಕೂ ಮೀರಿದ 'ಓಂ' ಕಾರ ಪ್ರಣವವೇ ಆತ್ಮ-ಪರಮಾತ್ಮ-ಪರಶಿವತತ್ವ ಎಂಬ ಬಯಲಲಿಂಗ ಭಾವಯ್ಯನವರು ಮಾಡಿದ ಬೇಟ. ಈ ಭಕ್ತಿ, ಸಹಜ-ಸುಂದರ ಸತ್ಯ ಸಾಧನೆಯಾಗಿ ಆನಂದ ತುಂಬಿಹುದಲ್ಲಾ!

ಇಲ್ಲಿ ಗಂಗಾಂಬಿಕೆಯವರಿಗೆ ಕರಸ್ಥಲದ ಲಿಂಗಭಾವ ಹೋಗಿ, ಬಯಲಲಿಂಗದ ಪ್ರೇಮ, ನಿಶ್ಚಯವಾಗಿಯೂ ಪರಮ ಸತ್ಯವೆನಿಸಿದೆ. ಆದರೂ, ಅದೇಕೋ ಒಮ್ಮೊಮ್ಮೆ ಒಂದೆಡೆ ಶಾಂತವಾಗಿ ಕುಳಿತು, ಲಿಂಗವನ್ನು ಪ್ರೇಮದಿಂದ ಮುಟ್ಟಿ, ಅಲಂಕರಿಸಿ, ಆನಂದದಿಂದ ನೋಡುತ್ತಾ ಪೂಜೆ ಮಾಡಬೇಕೆಂಬ ಭಕ್ತಿ-ಭಾವ ಕರುಳ ಕೂಗಾಗಿ ಕರೆಯುತ್ತಿದೆಯಲ್ಲಾ ಏಕೆ? ಇಷ್ಟಲಿಂಗವೆಂಬ ಕರದ ಕಂದನ ಇರುವು. ಹೋದಂತೆ ಎನಿಸಿದರು, ಹೋಗಿಲ್ಲ. ಆದ್ದರಿಂದ ನಾನು ಒಮ್ಮೊಮ್ಮೆ ಲಿಂಗವನ್ನು ಕರದಲ್ಲಿ ಹಿಡಿದು, ಅದಕ್ಕೆ ವಾತ್ಸಲ್ಯದಿಂದ ಭಕ್ತಿರಸದ ಅಮೃತಧಾರೆಯೆರೆದು, ಹಾಡುತ್ತಾ-ನಲಿಯುತ್ತಾ ಆನಂದಿಸಬಯಸುವೆ.

ಬಯಲದೇವನ ಬೆಳಗನುಟ್ಟು, ಕೂಡಲಸಂಗನ ಮೂಲ ಇರುವಿಕೆ ಎನಿಸುವ "ಶರಣತ್ವ"ದ ಅನುಭವವನ್ನು ಪಡೆಯಬಯಸಿರುವೆ. ಇದು ಸರಿಯಲ್ಲವೆ? ಚನ್ನಬಸವಣ್ಣ? ಎಂದು ತನ್ನ ಮನಸ್ಸಿನಲ್ಲಿ ಉಂಟಾದ ಲಿಂಗದ ಬಯಲಭಾವದ ಜೊತೆಗೆ ಲಿಂಗಪೂಜೆಯ ಭಕ್ತಿಬಯಕೆ ಎರಡನ್ನೂ ಮಾಡುತ್ತಿರುವೆನೆಂದು. ತಮ್ಮ ಅನುಭವವನ್ನು ಆತ್ಮೀಯರಾದ ಚೆನ್ನಬಸವಣ್ಣನವರೊಂದಿಗೆ ಹಂಚಿಕೊಂಡಿದ್ದಾರೆ.

ಇಲ್ಲಿ ಗಂಗಾಂಬಿಕೆಯವರು, ಬಯಲಭಾವಿಯಾದರೂ, ಭಕ್ತಿ ಭಾವವನ್ನು ಬಿಡದೆ, ಕರಸ್ಥಲ ಲಿಂಗವನ್ನು ನೋಡುತ್ತಾ ಬಾಹ್ಯ ಲಿಂಗವನ್ನು ಬಿಡದೆ, ಕರಸ್ಥಲ ಲಿಂಗವನ್ನು ನೋಡುತ್ತಾ ಬಾಹ್ಯಲಿಂಗದ ಭಾವವಳಿದು, ಬಯಲಲಿಂಗವಾಗಿ ನಿಲ್ಲಬೇಕೆಂಬುದನ್ನು ಸಾರುತ್ತಿದ್ದಾರೆ. "ಕೇಳಾ ಚನ್ನಬಸವಣ್ಣ" ಎನ್ನುವ ಧ್ವನಿಯಲ್ಲಿ ಲಿಂಗಾಂಗಯೋಗ ಸಾಧನೆಯು "ಬಯಲುಭಾವ" ಕಾಗಿಯೇ ಇರುವುದು ಎಂಬ ಪರಿಪೂರ್ಣದರಿವಿನ ಪ್ರಜ್ಞೆಯನ್ನು ಬೆಳಗಿಸಿದೆ. ಬಯಲು ಬೆಳಗನ್ನು ಬರಿದೇ ಭಾವಿಸಲುಬರದು. ಕ್ರಿಯಾ–ಜ್ಞಾನ–ಭಕ್ತಿ ಸಮ್ಮಿಳನಗೊಳಿಸಿ, ದೃಷ್ಟಿ–ಮನ–ಪ್ರಾಣ ತುಂಬಿ, ಲಿಂಗವನ್ನು ನೋಡುತ್ತಾ ಲಿಂಗದಿರುವನ್ನು ಗ್ರಹಿಸುತ್ತಾ ಲಿಂಗವೇ ಅಗುವ ಸಹಜ ಲಿಂಗಭಕ್ತಿಪಂಥವನ್ನು ಅನುಸರಿಸುವುದು ಸುಲಭ ಎಂದು ಗಂಗಾಂಬಿಕೆಯವರ ನಿಲುವು!

"ಲಿಂಗಕುಸುಮಗಳೆನ್ನಾಚಾರಲಿಂಗಕ್ಕಿಡಿಯೆ ಚೆನ್ನ,
ಲಿಂಗವಸನದಂತರಂಗವಸನ ತರಿಸಿದೆಯೆ ಚೆನ್ನ,
ಲಿಂಗದರ್ಚನೆಗುದಕವ ತರ ಪೋದೆಯೆ ಚೆನ್ನ,
ಲಿಂಗನಿಮಿತ್ತ ಕುಸುಮಾರಾಮ ವಿರಚಿಸ ಹೋದೆಯೆ ಚೆನ್ನ
ಬಸವಯ್ಯನಾಚರಣೆಗೆ ಸೊಗಸಾಗದಾಗಿ ಹೋದೆಯೆ
ಗಂಗಾಪ್ರಿಯ ಕೂಡಲಸಂಗ ಚೆನ್ನ"[೧೧]

ನಿಜವರಿದ ಶರಣೆ ಗಂಗಾಂಬಿಕೆಯ ಪೂಜಾ ವೈಶಿಷ್ಟ ಒಂದು ಬಗಯ ಸಂವಾದ ರೂಪದಲ್ಲಿ ಹೃದಯಂಗಮವಾಗಿದೆ. ಕ್ರಿಯಾ–ಜ್ಞಾನ ಸಮನ್ವಯತೆಯಿಂದ ಸತ್ಯವನ್ನರಿವ ಸೊಬಗಿನ ಸಾಧನೆ, ಈ ವಚನದಲ್ಲಿ ಮನನೀಯವಾಗ ಮೂಡಿನಿಂತಿದೆ.

ವಚನದ ಸಾಲು ಸಾಲುಗಳಲ್ಲಿ, ಮನದಲ್ಲಿಯೇ –ಮನಸ್ಸಿನೊಂದಿಗೆ ನಡೆವ ಸಂವಾದ; ಜೊತೆಗೆ ಮನಕ್ಕೆ ಉಪದೇಶ ಮಾಡುತ್ತಿರುವಂತಿದೆ. ಇದೊಂದು ವಿಶಿಷ್ಟ ಶೈಲಿಯ ವಚನವಾಗಿದ್ದು, ಪ್ರತಿ ಸಾಲಿನ ಕೊನೆಯಲ್ಲಿ ಬಳಸಿರುವ "ಚೆನ್ನ" ಎಂಬ ಶಬ್ದವು ಮನಸ್ಸನ್ನು ಕುರಿತು ಹೇಳಿದಂತಿದೆ. ಜೊತೆಗೆ ಸಾಹಿತ್ಯದ ಸೊಬಗನ್ನು ಹೆಚ್ಚಿಸಿದೆ.

ಒಮ್ಮೆ ಗಂಗಾಂಬಿಕೆಯವರ ಮನಸ್ಸಿನಲ್ಲಿ. ತಾನೂ ಕರಸ್ಥಲದಲ್ಲಿ ಲಿಂಗವಿಡಿದು ಬಗೆಬಗೆಯ ಹೂಗಳಿಂದ ಅಲಂಕರಿಸಿ. ಅರ್ಚಿಸಿ. ಆನಂದಿಸಬೇಕೆಂಬ ಭಾವ ಸುಳಿದಿದೆ. ಕೂಡಲೇ ಅವರಿಗೆ. ಪತಿ ಬಸವಣ್ಣನವರು ಹೇಳಿದ್ದ ಮಾತು ನೆನಪಾಗಿದೆ. "ನೋಡು ಗಂಗಾ. ಒಂದೆಡೆ ಕುಳಿತು ಮಾಡುವ ಪೂಜೆ. ಧ್ಯಾನ. ಅದೇ ಲಿಂಗಪೂಜೆಯೆಂದಲ್ಲ;

ನೀನು ಮಾಡುವುದೆಲ್ಲ ಪೂಜೆಯೆಂದು ಭಾವಿಸಿ, ಮಾಡತೊಡಗಿದರೆ, ಅದೇ ಆನಂದ ಕೊಡುವುದು. ಇದು ನಿಜವಾದ ಕ್ರಿಯಾಪೂಜೆ"[೨] ಎಂದಿದ್ದರು. ಅದನ್ನು ಸ್ಮರಿಸಿಕೊಂಡ ಗಂಗಾಂಬಿಕೆ ಪೂಜಿಸಲು ಇಚ್ಛೈಸುತ್ತಿಹ ಮನಕ್ಕೆ ಉಪದೇಶ ಮಾಡುತ್ತಿದ್ದಾರೆ. ಇದನ್ನು ತೂರ್ಯ ಸಂಭಾಷಣೆ ಎನ್ನಬಹುದೇನೋ!

'ಎಲೆ ಮನಸ್ಸೇ, ನೋಡು, ಸತ್ಯವನರಿದು, ಕ್ರಿಯಾಶೀಲರಾಗಿ ಬಾಳುವುದೆಲ್ಲ ಪೂಜೆ ಅಲ್ಲವೇನು? ಚೆನ್ನಾ....ನೀನು ಲಿಂಗಕ್ಕಾಗಿಯೆಂದು ಹೂಗಳನ್ನು ಆರಿಸಿ ತರುವುದು, ಅದನ್ನು ಕ್ರಿಯಾಲಿಂಗದ ಮೇಲಿಟ್ಟು, ಲಿಂಗವೆಂದರೆ ದೇವರು, ಅದು ಸದಾಕ್ರಿಯಾಭರಿತ! ಎಂದು ಪರಿಭಾವಿಸಿ, ಲಿಂಗದರಿವಿನೊಳಗಿದ್ದರೆ ಅದು ಪೂಜೆಯೇ!

"ನೋಡೆನ್ನ ಮನವೇ, ನೀನು ಲಿಂಗಕ್ಕೆ ಹೊದಿಸುವ ಅರಿವೆ ತಂದಿರಿಸವುದು ಕ್ರಿಯೆಯಾದರೆ, ಅಂತರಂಗದಲ್ಲಿ ಅರಿವ-ಅರಿವೇ ಅದು, ಜ್ಞಾನಲಿಂಗ. ಆ ಅರಿವನ್ನೇ ಸದಾ ಮನದಲ್ಲಿ ತುಂಬಿ ಕೊಂಡು ನಡೆದರೆ ಚನ್ನವಲ್ಲವೆ? ನಾವು ಮಾಡುವ ಕ್ರಿಯೆಗಳ ಲೆಲ್ಲಾ ಲಿಂಗದರಿವಿನಲ್ಲಿ ನೀ ಇರುವಿಯಾದರೆ, ಲಿಂಗಕ್ಕೆ ನೀರೆರೆವ ಕ್ರಿಯೆ ಆಯಿತ್ತೆಂದು ತಿಳಿ, ಲಿಂಗಚೈತನ್ಯವಿರುವುದರಿಂದ ನಿನ್ನರಿವಿದೆ ಎಂಬುದನ್ನರಿತು ಸುಮ್ಮನಿರು. ಆಗ, ಲಿಂಗದರಿವು ತಾನೇ ಉಂಟಾಗುವುದು. ಆದ್ದರಿಂದ ಮನಸ್ಸೇ, ಪೂಜೆ ಮಾಡಬೇಕಿದೆ – ಮಾಡಲಿಲ್ಲ ಎಂಬ ದ್ವಂದ್ವ ಭಾವ ತರದೇ ತಣ್ಣಗಿರು' ಎನ್ನುತ್ತಾ ಮನವನ್ನು ಶಾಂತಗೊಳಿಸುತ್ತಿದ್ದಾರೆ.

ಲಿಂಗಕ್ಕಾಗಿಯೇ ಎಂದು ಲಿಂಗನಿಮಿತ್ತ್ಯ ಮಾಡಿಕೊಂಡು ಸುಂದರ ಹೂಮಾಲೆ ಮಾಡಿ, ಅರ್ಪಿಸ ಬಯಸುತ್ತಿರುವೆಯಾ ಮನವೇ? ಸುಮ್ಮನೆ ಜೀವನ ಮಾಲೆಯನ್ನೇ ದೇವನಿಗೆ ಅರ್ಪಿಸಿ ಬಿಡು. ಆಗ ಅದೇ ನಿಜವಾದ ಪೂಜೆ-ನಿಜವಾದ ಅರ್ಪಣೆ ಅದರಿಂದಲೇ ಅನುಭವ ಲಭಿಸುವುದು. ನೀನು ಮಾಡುವ-ನೀಡುವ-ನೋಡುವ-ಅನುಭವಿಸುವ ಎಲ್ಲ ಕ್ರಿಯೆಗಳ ಹಿಂದೆ ಪರಮಾಧಾರವಾದ ಪರಮಾತ್ಮನೇ ಇರುವನೆಂದು ಭಾವಿಸಿದರೆ, ಅದೇ ಚೆನ್ನಾದಕ್ರಿಯೆ, ಇದನ್ನರಿತುಕೋ ಎಲೆ ಮನವೇ ಎಂದಿದ್ದಾರೆ.

ಮಾಡುವುದೆಲ್ಲ ಪೂಜೆಯೇ ಎಂದು ಭಾವಿಸಿ, ನಡೆ-ಎಂದು ಹೇಳಿದ ಬಸವಣ್ಣನವರ ಆಚರಣೆಯ ಸೊಗಸು, ನಿನಗೆ ಪ್ರಿಯವೆನಿಸಲಿಲ್ಲವೆ? ಇದನ್ನು ಒಂದಿಷ್ಟು ಅನುಸರಿಸಿ ನೋಡು, ಆಗ ಅದರಿಂದ ಜೀವನವೇ ಸರಳ-ಸಹಜವಾಗಿ ಅನುಭವ ಪೂರ್ಣವಾಗುವುದು; ಆನಂದಭರಿತವಾಗುವುದು. ಕುಳಿತು ಪೂಜಿಸುವುದೇ ಪೂಜೆಯಲ್ಲ. ಜೀವನವೆಲ್ಲ ಪೂಜೆಯೇ. ಮಾಡುವ-ನೀಡುವ-ನೋಡುವ-ಕೂಡುವ ಎಲ್ಲ ಕ್ರಿಯೆಗಳೂ ಲಿಂಗಪೂಜೆಯಲ್ಲವೆ? ಲಿಂಗಕ್ಕಾಗಿಯೇ ಮಾಡಿ, ಲಿಂಗಪೂಜಿಸಿ, ಲಿಂಗವೇ ಆಗಿ ಬಿಡುವುದು. ಹೀಗೆ ನಡೆದರೆ ಮಾತ್ರ ಚೆನ್ನ ಎನಿಸುತ್ತದೆ. ಎಲೆ ಮನವೆ, ಗಂಗಾಪ್ರಿಯನಾಗಿ ಕೂಡಲಸಂಗನ ಶರಣನೆನಿಸಿಹ ಬಸವಣ್ಣನವರಿಗೂ ಪ್ರಿಯವೆನಿಸುತ್ತದೆ.

ಒಟ್ಟಾರೆ ಗಂಗಾಂಬಿಕೆ ಬಸವಣ್ಣನ ಪ್ರಿಯಸತಿಗಾಗಿ ಸಭ್ಯ ಸುಸಂಸ್ಕೃತ ಗೃಹಿಣಿಯಾಗಿ ಅವರ ಅನುವರ್ತಿಯಾಗಿ ಬಾಳಿದ ಶಿವಶರಣೆ. ನೀಲಲೋಚನೆಯನ್ನು ತಂಗಿಯಂತೆ

ಭಾವಿಸಿ ಅನ್ಯೋನ್ಯಳಾಗಿ ಬಾಳಿ ಬಸವಣ್ಣನವರಿಗೆ ಸುಂದರ ಕೌಟುಂಬಿಕ ಪರಿಸರದ ಸ್ಫೂರ್ತಿದೇವತೆಯಂತೆ ಪ್ರೇರಕ ಶಕ್ತಿಯಾದಳು. ಶರಣರೆಲ್ಲರಿಗೂ ಸೋದರಿಯಂತೆ ಗುರುಲಿಂಗ ಜಂಗಮ ಸೇವೆಯ ತ್ರಿವಿಧ ದಾಸೋಹ ಕಾರ್ಯಕ್ಕೆ ತನು-ಮನ-ಧನವನ್ನು ಸಂತೃಪ್ತಿಯಿಂದ ಅರ್ಪಿಸಿ ಕೃತಾರ್ಥಳಾಗಿ ಬಾಳ ಸಾರ್ಥಕತೆ ಪಡೆದಳು. ಅವಳ ಜೀವನದ ಪೂರ್ವಾರ್ಧದಷ್ಟೇ ಉತ್ತರಾರ್ಧವೂ ವಿಶಿಷ್ಟವಾಗಿದೆ. ಬಸವೇಶ್ವರನು ಕೂಡಲಸಂಗಮದಲ್ಲಿ ಐಕ್ಯನಾದ ಬಳಿಕ ಶಿವಶರಣರಿಗೆ ಮಾತೆಯೇ ಆಗಿ ಪರಿಣಮಿಸಿ ಅಕ್ಕ ನಾಗಾಯಿಯೊಡನೆ ಶರಣ ಸಂಕುಲ ವಚನ ಸಾಹಿತ್ಯದ ರಕ್ಷಣೆಗೆ ತೊಡಗಿಸಿಕೊಂಡ ಉದಾತ್ತ ಚೇತನವಾಗಿದ್ದಾಳೆ. ಗುರು ಘನಲಿಂಗಿ ರುದ್ರಮುನಿ ದೇವರ ಆಜ್ಞಾನುಸಾರ ವೀರಶೈವ ಸಂಪತ್ತಿನ ಉಳಿವಿಗಾಗಿ, ವೀರವನಿತೆಯಾಗಿ ಕಾಳಗದಲ್ಲಿ ಹೋರಾಡಿ ಪ್ರಾಣ ಅರ್ಪಿಸಿದ ಸಂಕಲ್ಪ ಶಕ್ತಿಯ ವೀರಾಂಗನೆಯಾಗಿದ್ದಾಳೆ. ಸಂದರ್ಭ ಬಂದಾಗ ಸಾತ್ವಿಕ ಮಹಿಳೆಯರು ವೀರಾವೇಶದಿಂದ ರಣಾಂಗಣಕ್ಕೆ ಇಳಿಯಬಲ್ಲರು ಎಂಬುದನ್ನು ಈ ಸಾಧ್ವೀಮಣಿ ಸಾಬೀತು ಪಡಿಸಿದ್ದಾಳೆ.

ಗಂಗಾಂಬಿಕೆಯ ಜೀವನ ಆದರ್ಶಗಳು ಅವಿಸ್ಮರಣೀಯ. 'ಗಂಗಾಪ್ರಿಯ ಕೂಡಲ ಸಂಗ' ಅಂಕಿತದಲ್ಲಿ ನೂರಾರು ವಚನಗಳನ್ನು ರಚಿಸಿರುವ ವಚನಕಾರ್ತಿಯಾಗಿ ಅವಳು ಸಮರ್ಥಳು. ದೊರಕಿರುವ ೯ ವಚನಗಳಲ್ಲಿಯೇ ಆಕೆ ತನ್ನ ಜೀವನದ ಪ್ರಮುಖ ಘಟನೆಗಳನ್ನು ಬಿತ್ತರಿಸಿರುವ ಅರ್ಥವ್ಯಾಪ್ತಿಯಿದೆ. ಐತಿಹಾಸಿಕ ಮಹತ್ವದ ಅರ್ಥಗಳನ್ನು ತುಂಬಿಕೊಂಡ ಮಹತ್ವವಿದೆ. ಸರಳ ಭಾಷೆ, ಹೃದಯಂಗಮ ಭಾವಾಭಿವ್ಯಕ್ತಿ ಪರಿಣಾಮಕಾರಿಯಾಗಿದೆ. ಆದರ್ಶ ಸತಿ ಗಂಗಾಂಬಿಕೆ ಸಾಧಿಸಿದ ಶಿವಾನುಭವದ ಔನ್ನತ್ಯ, ಸಂಯಮ, ಕೌಶಲ್ಯಗಳು, ತೆರೆದ ಮನಸ್ಸು, ಉದಾತ್ತ ಹೃದಯ, ಗುಣಗ್ರಾಹಿ ನಿಲುವು, ಧೀರತೆ ವಚನಗಳಲ್ಲಿ ಅಚ್ಚಳಿಯದ ಪರಿಣಾಮ ಬೀರುತ್ತದೆ.

ಗಂಗಾಂಬಿಕೆಯದು ವ್ಯಕ್ತಿ ವೈಶಿಷ್ಟವುಳ್ಳ ಜೀವನ. ಶರಣರ ರಕ್ಷಣಾ ಹೋರಾಟದಲ್ಲಿ ಪಾಲ್ಗೊಂಡ ಹೋರಾಟಗಾರ್ತಿಯಾಗಿ ಕೆಚ್ಚೆದೆಯ ಸಾಹಸಿ ಹೆಣ್ಣು ಮಗಳು. ಆಕೆ ನಿರ್ಭೀತ ನಿಲುವು, ಹೊಣೆಗಾರಿಕೆ, ಮಾತೃಶಕ್ತಿ, ವೀರಮರಣವನ್ನಪ್ಪಿದ ವಿರಳ ಶರಣಾ ರತ್ನ. ಶರಣೆಯರ ಸಮೂಹದಲ್ಲಿ ಗಂಗಾಂಬಿಕೆಯದು ಧೀರ ಗಂಭೀರ ವ್ಯಕ್ತಿತವಾಗಿ, ಅಪೂರ್ವ ಸಾಧನೆಯಿಂದ ಚಿರಸ್ಥಾಯಿಗೊಂಡಿದೆ.

## ಕೊನೆ ಟಿಪ್ಪಣಿ

೧. ಫ.ಗು. ಹಳಕಟ್ಟಿ, ಶಿವಶರಣೆಯರ ಚರಿತ್ರೆ. ಪುಟ.೧೭೬.

೨. ಅರಿವು–ಆಚಾರ. ಬಿ.ಮಹಾದೇವಪ್ಪ. ಪ್ರಕಾಶಕರು ಅರಿವು–ಆಚಾರ ಪ್ರಕಟನಾಲಯ ಯಾದಗಿರಿ. ೧೯೯೯. ಪುಟ. ೪೬೦.

೩. ವಚನ ಸಾಹಿತ್ಯ ಮಾಲಿಕೆ – ೮೨. ಗಂಗಾಂಬಿಕೆ – ನೀಲಾಂಬಿಕೆ. ಡಾ. ಕೆ.ಎಸ್. ರತ್ನಮ್ಮ. ಪ್ರಕಾಶಕರು ಅಖಿಲ ಕರ್ನಾಟಕ ವಚನ ಸಾಹಿತ್ಯ ಪರಿಷತ್ತು. ಮೈಸೂರು.೨೦೦೯. ಪುಟ– ೯.

೪. ವಚನ ಸುಮ ಸೌರಭ. ಮಾತೆ ವಾಗ್ದೇವಿ. ಬಸವತತ್ವ ಅನುಭಾವ ಕೇಂದ್ರ ಬೆಳಗಾವಿ. ಪ್ರಕಾಶಕರು ಲಿಂಗಾಯಿತ ಸಂಶೋಧನಾಕೇಂದ್ರ. ಬೆಳಗಾವಿ – ೨೦೧೨. ಪುಟ.೮.

೫. ಅರಿವು–ಆಚಾರ. ಬಿ.ಮಹಾದೇವಪ್ಪ. ಪ್ರಕಾಶಕರು ಅರಿವು–ಆಚಾರ ಪ್ರಕಟನಾಲಯ ಯಾದಗಿರಿ. ೧೯೯೯. ಪುಟ. ೪೬೦.

೬. ಶಿವಶರಣೆಯರ ವಚನ ಸಂಪುಟ–೫ ಸಂಪಾದಕ ಡಾ. ವೀರಣ್ಣ ರಾಜೂರ, ಕರ್ನಾಟಕ ಸರ್ಕಾರ, ಕನ್ನಡ ಪುಸ್ತಕ ಪಾಧಿಕಾರ. ಬೆಂಗಳೂರು –೨೦೦೧ ಪದ್ಯ ೫. ಪುಟ.೪೬೩.

೭. ವಚನ ಸುಮ ಸೌರಭ. ಮಾತೆ ವಾಗ್ದೇವಿ. ಬಸವತತ್ವ ಅನುಭಾವ ಕೇಂದ್ರ ಬೆಳಗಾವಿ. ಪ್ರಕಾಶಕರು ಲಿಂಗಾಯಿತ ಸಂಶೋಧನಾಕೇಂದ್ರ. ಬೆಳಗಾವಿ – ೨೦೧೨. ಪುಟ.೩೧.

೮. ಶಿವಶರಣೆಯರ ವಚನ ಸಂಪುಟ–೫ ಸಂಪಾದಕ ಡಾ. ವೀರಣ್ಣ ರಾಜೂರ, ಕರ್ನಾಟಕ ಸರ್ಕಾರ, ಕನ್ನಡ ಪುಸ್ತಕ ಪಾಧಿಕಾರ. ಬೆಂಗಳೂರು –೨೦೦೧ ಪದ್ಯ ೩. ಪುಟ.೨೩೮.

೯. ಅರಿವು–ಆಚಾರ. ಬಿ.ಮಹಾದೇವಪ್ಪ. ಪ್ರಕಾಶಕರು ಅರಿವು–ಆಚಾರ ಪ್ರಕಟನಾಲಯ ಯಾದಗಿರಿ. ೧೯೯೯. ಪುಟ. ೪೬೧.

೧೦. ವಚನ ಸಾಹಿತ್ಯ ಮಾಲಿಕೆ – ೮೨. ಗಂಗಾಂಬಿಕೆ – ನೀಲಾಂಬಿಕೆ. ಡಾ. ಕೆ.ಎಸ್. ರತ್ನಮ್ಮ. ಪ್ರಕಾಶಕರು ಅಖಿಲ ಕರ್ನಾಟಕ ವಚನ ಸಾಹಿತ್ಯ ಪರಿಷತ್ತು. ಮೈಸೂರು.೨೦೦೯. ಪುಟ– ೧೭.

೧೧. ವಚನ ಸುಮ ಸೌರಭ. ಮಾತೆ ವಾಗ್ದೇವಿ. ಬಸವತತ್ವ ಅನುಭಾವ ಕೇಂದ್ರ ಬೆಳಗಾವಿ. ಪ್ರಕಾಶಕರು ಲಿಂಗಾಯಿತ ಸಂಶೋಧನಾಕೇಂದ್ರ. ಬೆಳಗಾವಿ – ೨೦೧೨. ಪುಟ.೪೨.

೧೨. ವಚನ ಸುಮ ಸೌರಭ. ಮಾತೆ ವಾಗ್ದೇವಿ. ಬಸವತತ್ವ ಅನುಭಾವ ಕೇಂದ್ರ ಬೆಳಗಾವಿ. ಪ್ರಕಾಶಕರು ಲಿಂಗಾಯಿತ ಸಂಶೋಧನಾಕೇಂದ್ರ. ಬೆಳಗಾವಿ – ೨೦೧೨. ಪುಟ.೪೩.

## ೩ : ಈ. ನೀಲಾಂಬಿಕೆ

ನೀಲಮ್ಮ, ನೀಲಾಂಬಿಕೆ, ನೀಲಲೋಚನೆ– ಈ ಹೆಸರುಗಳಿಂದ ಪ್ರಸಿದ್ಧಳಾದ ಈಕೆ ಬಸವಣ್ಣನವರ ಎರಡನೆಯ ಪತ್ನಿ. ಮೊದಲನೆಯ ಹೆಂಡತಿಯಾದ ಗಂಗಾಂಬಿಕೆ ಸೋದರ ಮಾವನಾದ ಬಲದೇವನ ಮಗಳೆಂದು ಸ್ಪಷ್ಟವಿದೆ. ಆದರೆ ನೀಲಾಂಬಿಕೆ ಯಾರ ಮಗಳೆಂಬ ವಿಷಯವಾಗಿ ಹಾಗೂ ಇವಳ ನಿಜನಾಮದ ವಿಷಯವಾಗಿ ಕಾವ್ಯಗಳು ಸಂದೇಹರೂಪದ ಅಭಿಪ್ರಾಯಗಳನ್ನು ನೀಡಿವೆ.

೧೨ನೇ ಶತಮಾನದ ಕ್ರಾಂತಿ ಪುರುಷ ಬಸವೇಶ್ವರನ ಧರ್ಮ ಪತ್ನಿ ನೀಲಾಂಬಿಕೆ. ಶರಣರ ವೈಚಾರಿಕ ಚಿಂತನೆ ಹಾಗೂ ವಿದ್ಯೆಯ ಸಾರ್ಥಕ ಸದುಪಯೋಗದ ಎರಡು ವಿಶಿಷ್ಟ ನೆಲೆಗಳಾಗಿ ಅಕ್ಕಮಹಾದೇವಿ ಹಾಗೂ ನೀಲಾಂಬಿಕೆಯ ವ್ಯಕ್ತಿತ್ವಗಳು ಕಂಡು ಬರುತ್ತವೆ. ಅಕ್ಕನದು ಆಧ್ಯಾತ್ಮ ಕ್ಷೇತ್ರದ ನಿರ್ಭಿತ ಸಾಧನೆ, ನೀಲಾಂಬಿಕೆಯದು ವೈಚಾರಿಕ ವ್ಯಕ್ತಿತ್ವ. ಇಬ್ಬರೂ ಷಟ್ಸ್ಥಲ ಸಾಧನೆಗೂ ನಿದರ್ಶನಗಳಾಗಿದ್ದಾರೆ. ಸಂಸಾರದೊಳಗಿದ್ದೂ ಮುಕ್ತಿಯನ್ನು ಸಾಧಿಸಬಹುದು ಎಂಬ ವೀರಶೈವ ಧರ್ಮದ ತಾತ್ವಿಕ ನಿಲುವನ್ನು ಸಮರ್ಥಿಸುವಂತೆ ನೂರಾರು ಶರಣೆಯರು ಇವರೊಡನೆ ಭಕ್ತಿ ಧರ್ಮದ ಜೊತೆಗೆ ವೈಯಕ್ತಿಕ ವಿಕಾಸಕ್ಕೂ ಅವಕಾಶ ಪಡೆದರು. ಸಾಧನೆಯ ಔನ್ನತ್ಯವನ್ನು ದರ್ಶಿಸಿದ ಇಂತಹ ಶರಣೆಯರ ಸಮೂಹದಲ್ಲಿ ನೀಲಾಂಬಿಕೆ ಪ್ರಮುಖಳಾಗಿದ್ದಾಳೆ.

ಬಸವಣ್ಣನವರ ಮೊದಲ ಪತ್ನಿ ಗಂಗಾಂಬಿಕೆ. ಈಕೆ ಬಸವಣ್ಣನ ಸೋದರಮಾವ ಬಿಜ್ಜಳನ ದಂಡನಾಯಕನಾಗಿದ್ದ ಬಲದೇವನ ಮಗಳೆಂಬುದು ಸ್ಪಷ್ಟವಿದೆ. ಆದರೆ ನೀಲಾಂಬಿಕೆ ಯಾರ ಮಗಳೆಂಬ ವಿಷಯದಲ್ಲಿ ಸ್ಪಷ್ಟತೆಯಿಲ್ಲ. ಹಾಗೂ ಇವಳ ಹೆಸರಿನ ಬಗ್ಗೆ ಕಾವ್ಯಗಳಲ್ಲಿ ಸಂದೇಹ ರೂಪದ ಅಭಿಪ್ರಾಯಗಳಿರುವುದರಿಂದ ಈಕೆಯ ಬಗ್ಗೆ ಭಿನ್ನಮತಗಳು ವಿದ್ವಾಂಸರಲ್ಲಿ ಕಂಡು ಬರುತ್ತದೆ. ಈಕೆಗೆ ನೀಲಮ್ಮ, ನೀಲಲೋಚನೆ, ನೀಲಾಂಬಿಕೆ ಎಂಬ ಹೆಸರುಗಳು ಇರುವುದು ಇದನ್ನು ಬೆಂಬಲಿಸುತ್ತದೆ. ಹರಿಹರ ಮತ್ತು ಭೀಮಕವಿ ಮಾಯಿದೇವಿಯ ಹೆಸರನ್ನು ಗಂಗಾಂಬಿಕೆಯೊಂದಿಗೆ ಬಳಸಿರುವುದರಿಂದ ಈಕೆಯ ಮತ್ತೊಂದು ಹೆಸರು ನೀಲಾಂಬಿಕೆ ಇರಬಹುದು ಎಂಬ ಊಹೆಗೆ ಎಡೆನೀಡಿದೆ.

"ಈಕೆ ಸಿದ್ಧರಸನ ಪುತ್ರಿ, ಬಸವಣ್ಣನ ಸೋದರಮಾವ ಸಿದ್ಧಣ್ಣ. ದಂಡಾಧಿಪನೆಂದು ವೀರಶೈವ ಗ್ರಂಥಗಳಲ್ಲಿ ಉಲ್ಲೇಖಿಸಲಾಗಿದೆ".[೧] ಚಾಲುಕ್ಯರಿಗೆ ಮಾಂಡಲೀಕರಾಗಿದ್ದ ಕಳಚೂರ್ಯ ವಂಶದ ಪ್ರಸಿದ್ಧ ಅರಸನಾಗಿದ್ದ ಪೆರ್ಮಾಡಿಯು ಬಿಜ್ಜಳನ ತಂದೆ. ಪೆರ್ಮಾಡಿಯು ರಾಜನಾಗಿದ್ದ ಅವಧಿಯಲ್ಲಿ ಸಿದ್ಧಣ್ಣನೇ ದಂಡಾಧಿಪನಾಗಿದ್ದನು. ಮರಣ ಕಾಲದಲ್ಲಿ ಬಿಜ್ಜಳನು ಪೆರ್ಮಾಡಿಯು ಸಿದ್ಧಣ್ಣನ ವಶಕ್ಕೆ ಒಪ್ಪಿಸಿದನು. ಈ ಸಿದ್ಧಣ್ಣನ

ಮಗಳೇ ನೀಲಾಂಬಿಕೆ. ಬಿಜ್ಜಳನ ಜತೆಯಲ್ಲಿ ಬೆಳೆದವಳಾಗಿದ್ದರಿಂದ ಬಿಜ್ಜಳನ ಸೋದರಿಯೆಂದೆ ಭಾವಿಸಲಾಗಿದೆ. ಭೀಮಕವಿಯು ಈಕೆಯ ವಿಷಯದಲ್ಲಿ ಮೌನ ತಳೆದಿದ್ದಾನೆ. ಲಕ್ಕಣ್ಣ ದಂಡೇಶ ಇವಳನ್ನು ಬಿಜ್ಜಳನ ತಂಗಿಯೆಂದು ನೇರವಾಗಿ ಹೇಳಿದರೆ, ವೀರಶೈವಾಮೃತ ಮಹಾ ಪುರಾಣ ಸಿದ್ಧರಸನ ಮಗಳೆಂದು ಬಾಯಿಬಿಟ್ಟು ಹೇಳುತ್ತದೆ. ಈ ಎರಡೂ ಅಭಿಪ್ರಾಯಗಳನ್ನು ಸಮೀಕರಿಸುವನೇನೊ ಎಂಬಂತೆ ಸಿಂಗಿರಾಜನು ನೀಲಲೋಚನೆ ಸಿದ್ಧರಸನ ಮಗಳು, ಬಿಜ್ಜಳನ ಸಾಕುತಂಗಿ ಎಂದು ಸೂಚಿಸುತ್ತಾನೆ. ಬಿಜ್ಜಳನ ತಂಗಿಯೆ ಆಗಿರುವ ಸಾಧ್ಯತೆಯ ಕಡೆ ಹೆಚ್ಚು ಒತ್ತು ಬೀಳುತ್ತದೆ.

ನೀಲಾಂಬಿಕೆಯು ಪ್ರಸಿದ್ಧ ವಚನಕಾರ್ತಿ. ಸಂಗ, ಸಂಗನ ಪ್ರಭು, ಸಂಗಮನಾಥ, ಸಂಗಯ್ಯ – ಎಂಬವು ಆಕೆಯ ಸ್ವರವಚನಗಳ ಅಂಕಿತ, ಸಂಗಯ್ಯ, ಸಂಗನಗುರು ಬಸವಾ, ಬಸವಪ್ರಿಯ ಕೂಡಲ ಸಂಗಮದೇವಾ – ಎಂಬಿವು ವಚನಾಂಕಿತವಾಗಿ ಕಂಡುಬರುತ್ತವೆ. ಈಕೆಯ ೨೮೮ ವಚನಗಳು ಲಭ್ಯವಿದೆ. ಇವಲ್ಲದೆ ಸ್ವರವಚನಗಳು, ಕಾಲಜ್ಞಾನ ಪ್ರಸಾದ ಸಂಪಾದನೆಯಂತಹ ಕೃತಿಗಳನ್ನು ರಚಿಸಿರುವಂತೆ ತಿಳಿದು ಬರುತ್ತದೆ. "ಈಕೆಗೆ ಬಾಲಸಂಗಯ್ಯ, ಹೆಸರಿನ ಮಗನಿದ್ದನೆಂದು, ಅವನು ಬಹುಬೇಗ ಲಿಂಗೈಕ್ಯನಾದನೆಂದು ಕಂಡುಬರುತ್ತದೆ ಎಂದು ಡಾ. ಆರ್. ಸಿ. ಹಿರೇಮಠರು ತಿಳಿಸಿದ್ದಾರೆ".[೨]

ಶಿವಶರಣೆ ನೀಲಾಂಬಿಕೆಯ ವೈಶಿಷ್ಟ್ಯವೆಂದರೆ ನಿಜಲಿಂಗ ಭಕ್ತಿ. ಆಕೆ ತನ್ನ ಇಷ್ಟಲಿಂಗವನ್ನು ಎಷ್ಟೊಂದು ಒಲಿಸಿ ಕೊಂಡಿದ್ದಳೆಂದರೆ ತಾಸೆರಡು ತಾಸು ಲಿಂಗ ನೋಟದಲ್ಲಿಯೇ ಲೀನಳಾಗಿ ಬಿಡುತ್ತಿದ್ದಳು. 'ಅಂಗೈಯೊಳಗಣ ಲಿಂಗವ ನೋಡುತ್ತ ನೋಟವೇ ಪ್ರಾಣವಾಗಿ, ಕೂಟವೇ ಪ್ರಾಣವಾಗಿ ಎಂದಿಪ್ಪನೋ? ಎನ್ನ ಅಂಗ ವಿಕಾರದ ಸಂಗವಳಿದು ಎಂದಿಪ್ಪನೋ ಲಿಂಗ ಲಿಂಗ ಎನ್ನುತ್ತ" ಎಂದು ಬಸವಣ್ಣನವರು ತಮ್ಮ ರಾಜ್ಯಕಾರ್ಯ ಭಾರದಲ್ಲಿ ಮತ್ತೆ ಮತ್ತೆ ಹಳ ಹಳಿಸುತ್ತಿದ್ದರೆ ಆ ಲಿಂಗ ನೋಟ ನೀಲಮ್ಮನವರಿಗೆ ಸಹಜವಾಗಿ ಸಿದ್ಧಿಯಾದಂತೆ ತನಗಾಗಿಲ್ಲವಲ್ಲ ಎಂಬ ವಿಷಾದವಾಗಿತ್ತು. ಲಿಂಗ ಪೂಜೆಯೆದರೆ ಅದು ನೀಲಮ್ಮನವರ ಲಿಂಗಪೂಜೆ ಎಂಬಷ್ಟು ಅಂದಿನ ಜನಮಾನಸದಲ್ಲಿ ತುಂಬಿ ಕೊಂಡಿತ್ತು. ಅದಕ್ಕಾಗಿಯೇ ನಮ್ಮ ಜನಪದ ಕವಿಯಿತ್ರಿಯೊಬ್ಬಳು "ಲಿಂಗಪೂಜೆ ಮಾಡುತ್ತಿದ್ದಳೇ! ನಿಜಭಕ್ತಿ ನೀಲಾ, ಲಿಂಗಪೂಜೆ ಮಾಡುತ್ತಿದ್ದಳೇ!" ಎಂದು ಹಾಡು ಕಟ್ಟಿ ಆನಂದಿಸಿದ್ದಾಳೇ.

ಈ ಒಂದು ದೃಷ್ಟಿಯಿಂದ ನೀಲಾಂಬಿಕೆ ತನ್ನ ಗುರುವನ್ನೂ ಮೀರಿಸಿದ್ದಳೆಂದರೆ ಅತಿಶಯೋಕ್ತಿಯ ಮಾತಾಗಲಾರದು. ಇಂತಹ ನಿಜ ಸುಖ ಎಲ್ಲರಿಗೂ ಪ್ರಾಪ್ತವಾಗುವುದಿಲ್ಲ. ಚಿತ್ತ, ಬುದ್ಧಿ, ಮನ, ಕರಣಂಗಳು ಲಯವಾದಾಗ ಮಾತ್ರ ಅದು ದೊರಕೊಳ್ಳುವುದು ಸಾಧ್ಯ. ಅಂತಹ ಅಂಗ-ಲಿಂಗ ಅವಿನಾಭಾವ ಸಂಬಂಧ ಏರ್ಪಡಬೇಕು. ಅಂಗದ ಮೇಲೆ ಲಿಂಗವನ್ನು ಸದಾ ಧರಿಸಿದ ಮಾತ್ರಕ್ಕೆ ಏರ್ಪಡುವ ಸಂಬಂಧ ಇದಲ್ಲ. ಗರ್ಭಿಣಿ ತಾಯಿ ನವ ಮಾಸ ತನ್ನ ಮಗುವನ್ನು ತನ್ನುದರದಲ್ಲಿ ಹೊತ್ತಿದ್ದರೂ ಆ ತಾಯಿ ತನ್ನ ಮಗುವನ್ನು ಗುರುತಿಸದಂತೆ ಲಿಂಗದ ಕಳೆ ಅಂಗಕ್ಕೆ ಉಂಟಾಗದು. ಅಂಗದ ನೋವು ಲಿಂಗಕ್ಕೆ ತಿಳಿಯದು. ಎರಡೂ ಒಂದಾಗ ಬೇಕಾದರೆ ಎರಡು ಕಣ್ಣಿನಿಂದ ಮಾತ್ರವಲ್ಲ ರೋಮಕೂಪಗಳೆಲ್ಲವೂ ಕಣ್ಣಾಗಿ ದೃಷ್ಟಿಸಬೇಕು.

ಕಲ್ಯಾಣದ ಕ್ರಾಂತಿ ಸನ್ನಾಹವಾಗಿ ಮುಖ್ಯ ನೇತಾರರಾದ ಬಸವಣ್ಣನವರು ರಾಜಾಜ್ಞೆ ಪ್ರಕಾರ ಕಲ್ಯಾಣದಿಂದ ನಿರ್ಗಮಿಸಬೇಕಾಗಿ ಬಂದಾಗ ಎಲ್ಲರೂ ಅಂಥದೊಂದು

ಸಂಭಾವ್ಯತೆಯನ್ನು ನಿರೀಕಿಸುತ್ತಿದ್ದರೆಂಬಂತೆ ಯಾರೂ ಅಧೀರರಾಗಲಿಲ್ಲ. ಯಾರೂ ತಲೆಯ ಮೇಲೆ ಕೈ ಹೊತ್ತು ಕುಳಿತಿರಲಿಲ್ಲ. ಶಿವಶರಣರೆಲ್ಲರೂ ತಾವೇ ತಾವಾಗಿ ತಮ್ಮ ತಮ್ಮ ಶಕ್ತ್ಯಾನುಸಾರ ಮತ್ತು ಯುಕ್ತ್ಯಾನುಸಾರ ಲಕ್ಷ್ಯ ನಿರ್ಧರಿಸಿಕೊಂಡಿದ್ದರು. ನೀಲಾಂಬಿಕೆ ರಾಜ ಮನೆತನದೊಡನೆ ನಿಕಟ ಸಂಬಂಧವಿಸಿಕೊಂಡವಳಾದ್ದರಿಂದ ಕಲ್ಯಾಣದಲ್ಲಿ ಮಹಾಮನೆಯನ್ನು ಮತ್ತೆ ಊರ್ಜಿತಗೊಳಿಸಿಕೊಳ್ಳಬಹುದೆಂದು ಹಾರೈಸಿಕೊಂಡಿದ್ದಳೆಂದು ತೋರುತ್ತದೆ. ಆಕೆ ಮೊದಮೊದಲು ಎಲ್ಲ ಶರಣರಂತೆ ಕಲ್ಯಾಣವನ್ನು ತ್ಯಜಿಸಲು ತಯಾರಾಗಲಿಲ್ಲ. ಕೂಡಲ ಸಂಗಮಕ್ಕೆ ಬರಬೇಕೆಂದು ಬಸವಣ್ಣನವರು ಹಡಪದ ಅಪ್ಪಣ್ಣನ ಮೂಲಕ ನಿರೂಪ ಕಳಿಸಿದಾಗ ಆಕೆಯಿಂದ ಹೊರಟ ಉದ್ಗಾರವೆಂದರೆ

"ನಾನಾರ ಸಾರುವೆನೆಂದು ಚಿಂತಿಸಲೇಕಯ್ಯ
ನಾನಾರ ಹೊಂದುವೆನೆಂದು ಭ್ರಮೆಬಡಲೇಕಯ್ಯ
ನಾನಾರ ಇರವನವೆನೆಂದು ಪ್ರಳಾಪಿಸಲೇಕಯ್ಯ
ಪರಿಣಾಮಮೂರ್ತಿ ಬಸವನ ರೂಪು ಎನ್ನ ಕರಸ್ಥಲದಲ್ಲಿ
ಬೆಳಗಿದ ಬಳಿಕ ಸಂಗಯ್ಯನ ಹಂಗು ನನಗೇಕಯ್ಯ" [೩]

ಆದರೂ ನೀಲಾಂಬಿಕೆ ಹಡಪದ ಅಪ್ಪಣ್ಣನ ಕಕ್ಕುಲತೆಯ ಆಗ್ರಹದ ಮೇರೆಗೆ ಕಲ್ಯಾಣವನ್ನು ತೊರೆದು ಕೂಡಲಸಂಗಮಕ್ಕೆ ತೆರಳಲು ತಯಾರಾದಳು. ಕೂಡಲ ಸಂಗಮದ ಸಮೀಪದ ಈಚೆಯ ದಡದ ತಂಗಡಿಗೆ ಬರುವಷ್ಟರಲ್ಲಿ ಕೃಷ್ಣಾನದಿ ತುಂಬಿ ಹರಿಯುತ್ತಿದ್ದಿತು. ಸಂಗಮನಾಥನು ಎಲ್ಲೆಲ್ಲೂ ಇರುವನೆಂಬುದನ್ನು ಸಾಬೀತು ಪಡಿಸಲೋ ಎಂಬಂತೆ, ಈಚೆಯ ದಡದಲ್ಲಿಯೇ ಲಿಂಗೈಕ್ಯಳಾಗಲು ಮನಸ್ಸು ಮಾಡಿದಳು. ಲೌಕಿಕ ಪತಿಯೊಡನೆ ಅಲೌಕಿಕ ಲಿಂಗಪತಿಯನ್ನು ಬೆರೆಯಲು ಇಚ್ಛಿಸಲಿಲ್ಲವೆಂದು ತೋರುತ್ತದೆ. ಹಡಪದ ಅಪ್ಪಣ್ಣನು ಮತ್ತು ಇತರ ಜನರು ದಿಙ್ಮೂಢರಾಗಿ ನೋಡು ನೋಡುತ್ತಿರವಂತೆ ತನ್ನ ಇಷ್ಟಲಿಂಗದಲ್ಲಿ ನೀಲಾಂಬಿಕೆ ಬಯಲಾದಳು.

ತಾನು ಲೋಕ ಜೀವನದಲ್ಲಿ ನಿರಾಸಕ್ತಳೆಂದೂ, ಈ ಲೋಕದಲ್ಲಿ ಶಾಶ್ವತವಾಗಿ ಯಾರೂ ಇರುವುದಿಲ್ಲ ಎಂದು ತಿಳಿದ ಕಾರಣ ಪ್ರಲಾಪಿಸುವುದೂ ಇಲ್ಲ. ತನ್ನ ಕಣ್ಮುಂದೆ ಬಸವನ ರೂಪು ಕರಸ್ಥಲದಲ್ಲಿ ಕಾಣುತ್ತಿದೆ. ಆತನ ಆರಾಧನೆಯೇ ತಪಸ್ಸಾಗಿ ಬಾಳಿದ ತನಗೆ ಕೂಡಲ ಸಂಗಮಕ್ಕೆ ಬಂದು ಐಕ್ಯಳಾಗಬೇಕೆಂಬ ಹಂಗು ಇಲ್ಲ. ಏಕೆಂದರೆ ಭಗವಂತ ಸರ್ವಾಂತರ್ಯಾಮಿ ಎಂಬುದರ ಅರಿವು ಇದ್ದವರಿಗೆ ಅಲ್ಲಿ ಇಲ್ಲಿ ಎಂಬ ಭೇದ ಕಾಣದು ಎಂಬುದನ್ನು ಹೀಗೆ ಪ್ರತಿಕ್ರಿಯಿಸುತ್ತಾಳೆ. ಅವಳ ಆತ್ಮ ನಿವೇದನೆ ಹೀಗಿದೆ.

"ನೋಡು ನೋಡು ನೋಡು ನೋಡು ಲಿಂಗವೆ?
ನೋಡು ಬಸವಯ್ಯನ ಮಾಡಿದಾಟವೆ?

ಅಲ್ಲಿಗೆನ್ನನು ಬರಹೇಳಿದರಂತೆ!
ಇಲ್ಲಿ ತಾನಿಲ್ಲವೆ ಸಂಗಯ್ಯನು
ಅಲ್ಲಿ ಇಲ್ಲಿ ಎಂಬ ಉಭಯ ಸಂದೇಹವು
ಬಲ್ಲ ಮಹಾತ್ಮರಿಗಿದು ಗುಣವೇ?." ೪

ಈ ವಚನ ಸ್ವರ ವಚನ ರೂಪದಲ್ಲಿಯೂ ದೊರೆತಿದ್ದು, ನೀಲಲೋಚನೆ ಉತ್ತಮ ಸಂಗೀತಗಾರ್ತಿ ಎಂಬುದನ್ನು ಶೃತಪಡಿಸಿದೆ. ನೀಲಲೋಚನೆಯ ಅನುಭಾವದ ಔನ್ನತ್ಯದ ವ್ಯಕ್ತಿತ್ವದ ವಸ್ತು ಸ್ಥಿತಿಯ ಅರಿವಿದ್ದು ಆಧ್ಯಾತ್ಮಿಕವಾಗಿ ಇಬ್ಬರು ಪತ್ನಿಯರಲ್ಲಿದ್ದ ಜ್ಞಾನದ ಅಂತರವೂ ತಿಳಿದಿದೆ. ಆದರೆ ತನ್ನ ಪತ್ನಿಯರು ತನ್ನ ಜೊತೆಗೆ ಸದಾ ಹೆಜ್ಜೆಯಿರಿಸಬೇಕೆಂಬ ನಿರೀಕ್ಷೆಯು ಬಸವಣ್ಣನ ಅಗಾಧ ಪ್ರೀತಿಯೇ ಇರಬಹುದಾದರೂ ಪುರುಷ ನಿರೀಕ್ಷಿತ ದೋರಣೆಗಳು ಅಳಿದಿಲ್ಲ. ನೀಲಲೊಚನೆಯ ವ್ಯಕ್ತಿತ್ವವನ್ನು ಆತ ಸಂಪೂರ್ಣವಾಗಿ ಅರಿತೇ ಇಲ್ಲ. ಸಾಂಪ್ರದಾಯಿಕವಾಗಿ ಪತಿಯ ಆಜ್ಞೆ – ಅದನ್ನನುಸರಿಸ ಬೇಕಾದ್ದು ಪತ್ನಿಯ ಕರ್ತವ್ಯವಷ್ಟೆ ಎಂಬುದು ಆತನಲ್ಲಿ ಸ್ಥಾಯಿಯಾಗಿ ಉಳಿದಿದೆ. ಹೀಗೆ ಬಸವಣ್ಣನಲ್ಲಿ ಈ ಸಂದರ್ಭದಲ್ಲಿ ಪುರುಷ ಪ್ರಾಧಾನ್ಯತೆಯ ಸಾಂಪ್ರದಾಯಿಕ ಅರಿವು ಪ್ರಧಾನವಾಗಿದ್ದರೂ ಅದನ್ನು ಮೀರಿದ ಬೆಳವಣಿಗೆ ಆಪ್ತತೆ, ಹಿರಿದಾಗಿ ಆವರಿಸಿದೆ. ಸಾಮಾಜಿಕವಾಗಿ, ಧಾರ್ಮಿಕವಾಗಿ, ಆತನ ವೈಚಾರಿಕ ಹರಹು ವಿಶಿಷ್ಟವಾಗಿದ್ದರೂ ಇತರ ಸ್ತ್ರೀಯರನ್ನು ಕುರಿತಂತೆ ಪರವಧು ಎಂದು ಕರೆವ ಸೌಜನ್ಯಪರತೆಯಿದ್ದರೂ ಸ್ವತಹ ತನ್ನ ಪತ್ನಿಯರ ಬಗ್ಗೆ ಬಸವಣ್ಣನವರು ಪುರುಷ ನಿರೀಕ್ಷಿತ ವರ್ತನೆ ಎನಿಸುತ್ತದೆ. ಅದನ್ನು ಮೀರಿದ ಮಾನಸಿಕ ಆಧ್ಯಾತ್ಮಿಕ ಬೆಳವಣಿಗೆ ಸ್ತ್ರೀಯರಾದ ನೀಲಲೋಚನೆ, ಗಂಗಾಂಬಿಕೆಯರಲ್ಲಿ ವಿಶಿಷ್ಟವಾಗಿ ಧ್ವನಿಸಿದೆ ವ್ಯಕ್ತಿತ್ವದ ಅನನ್ಯತೆಯೆಂಬುದು ಪುರುಷರಂತೆ ಸ್ತ್ರೀಯರಿಗೂ ಇರುತ್ತದೆ. ಸೂಕ್ತ ಸಂದರ್ಭಗಳಲ್ಲಿ ತನ್ನ ಅಂತರಂಗಿಕ ಪ್ರಾಮಾಣ್ಯದ ನಿರ್ಧಾರವನ್ನು ತೆಗೆದುಕೊಳ್ಳುವಲ್ಲಿ ಅದು ಬೆಳಗುತ್ತದೆ ಎಂಬುದು–ನೀಲಲೊಚನೆಯ ವಚನಗಳಲ್ಲಿ ಧ್ವನಿತವಾಗುತ್ತದೆ.

ನೀಲಲೋಚನೆಗೆ ಬಸವಣ್ಣನ ಬಗ್ಗೆ ಅಪಾರ ಭಕ್ತಿ, ಗೌರವ, ಪ್ರೀತಿ ತುಂಬಿದೆ. ಆದರೆ ಬಸವಣ್ಣ ಕೂಡಲ ಸಂಗಮದಲ್ಲೇ ಸಂಗಯ್ಯನಿದ್ದಾನೆ ಎಂಬಂತೆ ಅಲ್ಲಿಗೆ ತೆರಳಿದ್ದು ತನ್ನನ್ನು ಬರಹೇಳುತ್ತಿರುವ ಬಗ್ಗೆ ಕೋಪವಿಲ್ಲ. ಬಸವನನ್ನು ಮೀರಿಸಿದ ಜ್ಞಾನಿಯಾಗಿದ್ದಾಳೆ ನೀಲಲೋಚನೆ. ಸಾಮಾಜಿಕ ಸಂಘಟನೆ, ಸುಧಾರಣೆಯ ಕಾರ್ಯದೊಳಗೆ ಬಸವಣ್ಣ ಸಂಗಯ್ಯನನ್ನು ಕಂಡರೆ, ಇಂತಹ ಮಹೋನ್ನತ ವ್ಯಕ್ತಿತ್ವಕ್ಕೆ ಮಾರುಹೋದ ನೀಲಲೋಚನೆ ಬಸವಣ್ಣನಲ್ಲೇ ಸಂಗಯ್ಯನನ್ನು ಕಂಡಿದ್ದಾಳೆ. ಕೇವಲ ಸಾಂಪ್ರದಾಯಿಕ ಪತಿ–ಪತ್ನಿ ಸಂಬಂಧವನ್ನು ಮೀರಿ ಪ್ರಜ್ವಲ ವ್ಯಕ್ತಿತ್ವಗಳು ಒಂದನ್ನೊಂದು ಅರಿವ – ಗುರುತಿಸುವ – ಅದರಂತೆ ಆಗಿ – ಅದರೊಳಗೆ ತಾವಾಗುವ ಪ್ರಕ್ರಿಯೆಯಿಂದ ಇವರ ದಾಂಪತ್ಯವು ಶ್ರೇಷ್ಠವೆನಿಸಿದೆ. ಅಲ್ಲಿರುವ ಸಂಗಯ್ಯ ಇಲ್ಲೂ ಇದ್ದಾನೆ. ಒಂದಲ್ಲ ಒಂದು ದಿನ ಆತನಲ್ಲಿಯೇ ಒಡ ಬೆರೆಯಲು ಎಲ್ಲಿದ್ದರೂ ಒಂದೇ. ಅಲ್ಲಿ ಇಲ್ಲಿ ಎಂಬ ಉಭಯ ಸಂದೇಹ ಬಸವಣ್ಣನಂತಹ ಎಲ್ಲವನ್ನೂ ಬಲ್ಲ ಮಹಾತ್ಮರನ್ನು ಕಾಡಿತೇ? ಎಂಬ ಅಚ್ಚರಿ ಅವಳ ಪ್ರಶ್ನೆಯಲ್ಲಿದೆ. ಆದರು ಆಕೆ ಬಸವಣ್ಣನ ಬಳಿಗೆ ಹೋಗದೆ ತಾನು ಇದ್ದಲ್ಲೇ ತಪಸ್ವಿನಿಯಾಗಿ

ಶಿವಾನುಭಾವ ಸಾಧಕಳಾಗಿ ನಿರ್ಲಿಪ್ತತೆ ಸಾಧಿಸಿದ್ದಾಳೆ. ವಿಚಾರ ಸಂಪನ್ನೆಯಾಗಿ ಬದುಕಿನ ಸಾರ್ಥಕತೆ ಕಂಡುಕೊಳ್ಳುವ ನೀಲಾಂಬಿಕೆಯ ನಿಲುವು ಔನ್ನತ್ಯವೆನಿಸಿದರೂ ಆಕೆ ನೀಡುವ ವಿವರಣೆಯಲ್ಲಿ ಸಮಾನತೆ ಸ್ಪಂದನವಿದೆ.

"ಇಪ್ಪೆಯ ಹೂವನನುಗೊಳಿಸಲು ಇಪ್ಪೆ ಹಿಪ್ಪೆಯಾಯಿತ್ತು
ಸರ್ಪನ ಶಿರ ಕಂಠದಲ್ಲಿ ಮೂಗುತಿಯ ಸರಗೊಳಿಸಿದೆನಯ್ಯಾ
ನಾವಲ್ಲಿದ್ದಡೇನು, ನಾವಿಲ್ಲಿದ್ದಡೇನು?
ನಮ್ಮ ನಮ್ಮ ಸಂಸರ್ಗದಲ್ಲಿ ನಿರುಪಮಾಕಾರ ಮೂರ್ತಿಗಳಾಗಿ
ನಿರವಯವನ್ನೈದಿ ನಿಜಸುಖಿಗಳಾದೆವು
ಬಸವನ್ನಲ್ಲಿ ಎಮಗೆ ತೆರಪಿಲ್ಲವಯ್ಯಾ, ಅಪ್ಪಣ್ಣಾ
ಭಾವಶೂನ್ಯಳು ನಾನು ಸಂಗಯ್ಯಾ." [೫]

ಕೂಡಲ ಸಂಗಮದಲ್ಲಿ ನಿರವಲವೈದುವ ನಿರ್ಧಾರ ತಿಳಿಸಿರುವ ಬಸವಣ್ಣನ ಪ್ರಕಾರ ನಿರವಲನೈದುವುದು ಇದ್ದ ಸ್ಥಳಗಳಲ್ಲಿಯೇ ಸಾಧ್ಯ. ಆದ್ದರಿಂದ ಅಲ್ಲಿದ್ದರೇನು, ಇಲ್ಲಿದ್ದರೇನು? ಬಸವಣ್ಣನು ಜೀವನದಲ್ಲಿ ಅಂತಿಮ ಘಟ್ಟದಲ್ಲಿ ನಿಂತಿರುವ ಈ ಪ್ರಸಂಗದಲ್ಲಿ ನನಗೆ ಅಲ್ಲಿ ಹೋದರೂ ಬಸವನೊಡನೆ ಬದುಕು ಮುಂದುವರಿಸುವ ಅವಕಾಶವಿಲ್ಲ. ಒಟ್ಟಾರೆ ಜೀವನದ ಅಂತಿಮ ಹಂತಕ್ಕೆ ಬಂದ ಈ ಸಂದರ್ಭದಲ್ಲಿ ನಾನು ಭಾವಶೂನ್ಯಳೂ ಆಗಿದ್ದೇನೆ ಎಂದು ತಮ್ಮನ್ನು ಮರೆತು ಭಾವುಕನಾಗಿ ಸಂಗಮ್ಮಕ್ಕೆ ತೆರಳಿದ ಬಗ್ಗೆ ತನಗಿರುವ ಹುಸಿ ಮುನಿಸಿನಿಂದ ತಾನು ಎಲ್ಲಿದ್ದರೇನು? ಬಸವನಿಗೆ ಎಮಗೆ ತೆರಪಿಲ್ಲವಯ್ಯಾ ಎಂದು ಹೇಳುವಲ್ಲಿ ದಾಂಪತ್ಯದ ನರಗುಂಪು ತುಂಬಿದೆ.

"ಯತಿಯರ ಮನವನತಿ ವಿರತಾಕಾರವ ಮಾಡಿ ಕಂಡೆನಯ್ಯಾ
ಆ ಯತಿಗಳು ಅತಿ ವೀರ ಸಂಬಂಧಿಗಳಾಗಿರಲು
ವೀರತತ್ವದ ನೆಲೆಯೊಂದೊಂದು ಸಂಗವನ್ನೈದಿ
ಮುಖವಿಕಸಿತವಾಯಿತ್ತು.
ಅಪ್ಪಣ್ಣ ತಂದ ಅಪ್ರತಿಮ ಶಿವಾಚಾರ ನೆಲೆಯಾಗಿರಲು
ಆನು ಶಿವ ಶುಭವಂತಳಾದೆನಯ್ಯಾ
ಸಂಗಯ್ಯನಲ್ಲಿ ಬಸವನ ಭ್ರಮೆ ನಮಗೇಕಯ್ಯಾ." [೬]

ಅಪ್ಪಣ್ಣನ ಮೂಲಕ ತನ್ನನ್ನು, ಸಂಗಮಕ್ಕೆ ಬರಲು ಹೇಳಿಕಳುಹಿಸಿದ್ದನ್ನು ಒಪ್ಪದೆ ಬಸವನ ಭ್ರಮೆ ತನಗಿಲ್ಲ. ಶಿವಾಚಾರ ಸಂಪನ್ನಳಾಗಿ ತಾನು ಶಿವ ಶುಭವಂತಳಾಗಿರುವೆ ಎಂದು ಒಪ್ಪಿಕೊಂಡಳಾದರೂ ನೀಲಲೋಚನೆ ಬಸವಣ್ಣನ 'ಅಪ್ರತಿಮ ಶಿವಾಚಾರ' ನಿಲುವಿನ ಬದುಕ ಪ್ರೀತಿಯನ್ನು ಜತೆಜತೆಯಾಗಿ ಹಂಚಿಕೊಂಡ ಕಾರಣ ತನ್ನ ನಿಷ್ಠೆಯನ್ನು ಪತಿಪ್ರೇಮವನ್ನು ಮೆರೆಯಲು ಕಪ್ಪಡಿಗೆ ಹೊರಡಲು ನಿಶ್ಚಯಿಸುತ್ತಾಳೆ. ಬಸವಣ್ಣನ ಅವಳ

ಸಂಬಂಧದ ಸ್ವರೂಪವನ್ನು ನಿರೂಪಿಸಿರುವ ವಚನ ಹೀಗಿದೆ-

"ಆದಿ ಅನಾದದ ಬಿಂದುವನರಿದು ಭಕ್ತಿ
ಸಂಭಾಷಣೆಯಿಂದ ಮಾಡಿದ ಬಸವಾ
ಪ್ರಣವದಲ್ಲಿ ನಿಜವ ಕಂಡು ತೋರಿದ ಬಸವಾ,
ಆ ಪ್ರಣವದ ಘನವ ಕಂಡ ಬಸವಾ,
ಇತರ ತೃಪ್ತಿಯನ್ನನ್ನುಭವಿಸಬಲ್ಲ ಬಸವಾ
ನೀನೆನ್ನಲ್ಲಿ ಅಡಗಿ, ನಾ ನಿನ್ನಲ್ಲಿ ಅಡಗಿ
ನಾ ನಿನ್ನ ಮನದ ಅರಿವನರಿದು ಉಭಯವಿಲ್ಲವೆಂದೆನೆಂಬೆ ಬಸವಾ.
ಸುಖದ ಸಮಯಾಚಾರವ ಕಂಡು ನಿಜದಲ್ಲಿ ನಿಂದವಳಾನು ನಾನಯ್ಯ ಬಸವ
ಸಂಗಯ್ಯನಲ್ಲಿ ನಿಜವಿಡಿದ ಹೆಣ್ಣು ನಾನೇ ಅಹುದೆಂದು ನುಡಿದೆನಯ್ಯಾ ಅಪ್ಪಣ್ಣ."[೭]

ಬಸವಣ್ಣ ಅವಳ ಆಧ್ಯಾತ್ಮ ಗುರು ತನ್ನ – ಅವನ ಸಂಬಂಧ ಲೌಕಿಕ ದಾಂಪತ್ಯದ ನೆಲೆಯನ್ನು ಮೀರಿ ಆಧ್ಯಾತ್ಮಿಕ ಆವರಣದಲ್ಲಿ ನೆಲೆಸಿತ್ತು. ತನ್ನೊಡನೆ ಭಕ್ತಿ ಸಂಭಾಷಣೆಯ ಮೂಲಕ ಔನ್ನತ್ಯದೆಡೆಗೆ ಸಾಗಿತು, ತನಗೆ "ಓಂಕಾರ"ದ ಸತ್ಯವನ್ನು ತಿಳಿಸಿದ ಬಸವಣ್ಣ ಪ್ರಣವದ ಘನವ ಕಂಡವನು. ಆತ ತನ್ನೊಡನೆ ಇತರ ತೃಪ್ತಿಯನ್ನು ಅನುಭವಿಸಬಲ್ಲ ಎಂಬಲ್ಲಿ ಲೌಕಿಕ ಪಾರಮಾರ್ಥಿಕ ಸಾಮರಸ್ಯ ಸಾಧಿಸಿದ ತೃಪ್ತಿ ಅನುಭವಿಸಿ ತನಗೂ ಸವಿಯನ್ನು ಉಣ ಬಡಿಸಿದನು. ಆತನ ವ್ಯಕ್ತಿತ್ವ, ಪ್ರಭೆ ತನ್ನ ಅಂತರಂಗದಲ್ಲಿ ಅಡಗಿದೆ. ನಾನು ಆತನಲ್ಲಿ ಅಡಗುವ ಆತ್ಮೀಯಳು. ಇಂತಹ ಪರಸ್ಪರ ಸಮಾನ ಮನಸ್ಕ ಶಿವಭಕ್ತರು ಆದ ತಮಗೆ ತಾವು ಬೇರೆ ಬೇರೆ ಎಂಬ ಭಾವವಿಲ್ಲ. "ಸುಖದ ಸಮಯಾಚಾ ಕಂಡು ನಿಜದಲ್ಲಿ ನಿಂದವಳಾನು" "ಸಂಗಯ್ಯನಲ್ಲಿ ನಿಜವಿಡಿದ ಹೆಣ್ಣು ನಾನೇ ಹೌದು".[೮] ಎಂದು ಅಪ್ಪಣ್ಣನಿಗೆ ತಮ್ಮ ದಾಂಪತ್ಯದ ಸಾಮರಸ್ಯ ಕುರಿತು ಹೇಳುವ ನೀಲಲೋಚನೆಗೆ ತಾನು ಸರ್ವಶೀಲಳು. ಸದಾಚಾರ, ಸಮಯಾಚಾರ ಅರಿತು ಆಚರಣೆಯಲ್ಲಿರುವ ಕಾರಣ ತಾನು ದೈವ ಒಪ್ಪಿದ ಹೆಣ್ಣಾಗಿದ್ದೇನೆ ಎಂಬ ವೈಯುಕ್ತಿಕ ಹಿರಿಮೆ ಹೇಳುತ್ತ ಪತಿ ಭಕ್ತಿಯ ಅಧಿಕ್ಯವನ್ನು ತಿಳಿಸುವ ವಿಶಿಷ್ಟ ನಿರೂಪಣೆಯಿದೆ. ಅಪ್ಪಣ್ಣನೊಡನೆ ನಡೆಸಿದ ಸಂಭಾಷಣೆ ಆತ್ಮಿಕ ಸೊಗಸಿನಿಂದ ಕೂಡಿ ಐತಿಹಾಸಿಕ ವಾಸ್ತವವನ್ನು ತೆರೆದಿರಿಸಿದೆ.

ಪ್ರೇಮದ ತುಡಿತ ಅವಳನ್ನು ಇರಗೊಡದೆ ಕಪ್ಪಡಿಗೆ ಹೊರಡುತ್ತಾಳೆ. ತಂಗಡಿಗೆ ಬರುವ ವೇಳೆಗೆ ಬಸವಣ್ಣ ಐಕ್ಯನಾದ ಸಂಗತಿ ತಿಳಿದು ದಿಗ್ಭ್ರಾಂತಳಾಗುತ್ತಾಳೆ. ಅಲ್ಲಿಯೇ ತಂಗಿ ನಿರ್ವಯಲನೈದಳಾದ್ದರಿಂದ ಆ ಗ್ರಾಮಕ್ಕೆ ತಂಗಡಗಿ ಎಂಬ ಸ್ಥಳನಾಮವಿದೆ. ಅವಳಿಗೆ ಬಸವಣ್ಣನಿಲ್ಲದ ಜೀವನ ಶೂನ್ಯವೆನಿಸುತ್ತದೆ. ಆಧ್ಯಾತ್ಮಿಕ ಶಕ್ತಿ ಮಸುಳಿದಂತಾಗಿದೆ.

ನೀಲಮ್ಮ ಪತಿ ಲಿಂಗೈಕ್ಯನಾದ ದುಃಖದಿಂದ ಪರಿತಪಿಸಿ ರಚಿಸಿದ ವಚನಗಳು ಕರುಣಾಜನಕವಾದ ಶೋಕಗೀತೆಗಳಾಗಿವೆ.

"ಎಲೆ ಅಯ್ಯಗಳಿರಾ, ಎಲೆಗಳೆದ ವೃಕ್ಷವೆ ಕಂಡಿರೆ ಬಸವನ,

ಎಲೆ ಅಯ್ಯಗಳಿರಾ, ರೂಪಿಲ್ಲದ ಚೋಹವ ಕಂಡಿರೆ ಬಸವನ,

ಎಲೆ ಸ್ವಾಮಿಗಳಿರಾ, ನಿಮ್ಮ ನಿಲುವಿನ ದರ್ಪಣವ ಕಂಡಿರೆ ಬಸವನ

ಸಂಗಯ್ಯನಲ್ಲಿ ಸ್ವಯವಳಿದ ಬಸವನ ಕುರುಹ ಕಂಡಿರೆ". [೯]

ಹೀಗೆ ಬಸವಣ್ಣನನ್ನು ಪ್ರಕೃತಿಯಲ್ಲಿ ಹುಡುಕುವ ಈ ಅವಸ್ಥೆ ಅಕ್ಕಮಹಾದೇವಿ ಚೆನ್ನಮಲ್ಲಿಕಾರ್ಜುನನ್ನರಸುವಂದು ಪಡುವ ಕಾತುರದ ಅವಸ್ಥೆಗಿಂತ ಭಿನ್ನವಾದುದಲ್ಲ. ನಿರಾಕಾರ ಚೆನ್ನನ ಅಸ್ತಿತ್ವವನ್ನು ಅರಸುವ ಕಾತುರದಲ್ಲಿದ್ದ ಅಕ್ಕನ ತೀವ್ರತೆ ಇಲ್ಲಿಲ್ಲಿವಾದರೂ ಬಸವಣ್ಣನನ್ನು ಅಗಲಿರಲಾರದೆ ಸಮಸ್ತ ಪ್ರಕೃತಿಯಲ್ಲಿ ಅರಸುತ್ತಾಳೆ. ಆತನ ವ್ಯಕ್ತಿತ್ವ ಎಳೆಗಳೆದ ವೃಕ್ಷ, ರೂಪಿಲ್ಲದ ಚೋಹ, ಸ್ವಯವಳಿದವನು, ನಿಮ್ಮ ನಿಲುವಿನ ದರ್ಪಣ – ಎಂಬಿತ್ಯಾದಿ ಅನುಭಾವಿಕ ರೂಪಕಗಳಿಂದಲೇ ಹೇಳುವ ಪ್ರಬುದ್ಧತೆಯಿದೆ. ಬಸವನ ಐಕ್ಯ ಲೌಕಿಕ ಜಗತ್ತಿಗೆ ಸಾವು. ಆದರೆ ಅರಿವಿನ ಜಗತ್ತಿಗೆ ಸಾವಿಲ್ಲ. ಸತ್ತು ಬದುಕಿರುವುದು ಅನುಭಾವದ ಸಿದ್ಧಿ, ಆದ್ದರಿಂದಲೇ ಬಸವನಿಗಾಗಿ ಆಕೆಯ ಮನಸ್ಸು ಹಪಹಪಿಸುತ್ತದೆ.

"ಎಲೆ ಶರಣರಿರಾ, ಎಲೆ ಭಕ್ತರಿರಾ,

ಭಕ್ತಿ ಕಾಂಡವ ಮೂಲಿಗನ ಕಾಣಿರೆ ಬಸವನ!

ಆ ಭಕ್ತಿಯ ಸಂಗದ ಶಿವೈಕ್ಯನ ಕಾಣಿರೆ ಬಸವನ,

ಭಕ್ತಿ ನಿಜ ಸಮಾಧಿಯ ಸುಖವ ಕರುಣಿಸುವ

ಅಯ್ಯ ಬಸವನ, ಸಂಗಯ್ಯನ ಪ್ರಸಾದಿಯಾದ ಬಸವನ

ಕಾಣಿರೆ ಭಕರು". [೧೦]

ಅಕ್ಕ ಮಹಾದೇವಿ 'ಚಿಲಿಪಿಲಿ ಎಂದೋಡುವ ಗಿಳಿಗಳಿರಾ, ಕೋಗಿಲೆಗಳಿರಾ, ; ಎಂದು ತನ್ನ ದೈವ ಚೆನ್ನಮಲ್ಲಿಕಾರ್ಜುನನ್ನು ಕಂಡಿರಾ ಎಂದು ಕೇಳುವ ಆರ್ತತೆಯನ್ನು ನೀಲಮ್ಮಳ ಆಕ್ರಂದನ ಹೋಲುತ್ತಿದೆ.

ತನ್ನ ದುಃಖವನ್ನು ಅಕ್ಕಂದಿರಂತಹ ಶರಣೆಯರೊಡನೆ ಹೀಗೆ ನಿವೇದಿಸಿ ಕೊಳ್ಳುತ್ತಾ ಆರ್ತಳಾಗಿ ಶೋಕಿಸಿದ್ದಾಳೆ.

"ಕಾಮಿತ ಸುಖವ ಕಂಗೊಳಿಸಿದ ಗುರುವೆ,

ಕಲ್ಪಿತ ನಷ್ಟವ ಮಾಡಿದ ಗುರುವೆ,

ಎನ್ನಲಿಲ್ಲದ ಮೂರ್ತಿಯೆ ಎತ್ತಲಡಗಿದೆಯಯ್ಯ ಗುರುವೆ?

ಸುಖದುಃಖವನೊಂದು ರೂಪ ಮಾಡಿದ ಗುರುವೆ,

ಎತ್ತಲಡಗಿದೆಯಯ್ಯಾ ಸಂಗನ ಗುರುಬಸವಾ". [೧೧]

ನೀಲಾಂಬಿಕೆಗೆ ಬಸವಣ್ಣನು ಪತಿಯಷ್ಟೇ ಅಲ್ಲ. ಮಾರ್ಗದರ್ಶಿಸಿದ ಗುರುವೂ ಆಗಿದ್ದನು.

ಅವಳ ಜೀವನದ ಹೆಜ್ಜೆ ಹೆಜ್ಜೆಯಲ್ಲೂ ಅರ್ಥಪೂರ್ಣ ವ್ಯಕ್ತಿತ್ವದ ಬೆಳವಣಿಗೆ ಕಾರಣೀಭೂತನಾಗಿದ್ದನು. ಇಂತಹ ವ್ಯಕ್ತಿ ವಿಶಿಷ್ಟತೆಯ ಬಸವಣ್ಣನನ್ನು ಹುಡುಕುವ, ಆತನಿಗಾಗಿ ಪರಿತಪಿಸುವ ಭಾವದಲ್ಲಿ ಪತಿಯ ಪ್ರೀತಿಯ ಜೊತೆಗೆ ಗುರುವೆಂಬ ಭಕ್ತಿ-ಗೌರವದ ಅಧಿಕ್ಯವಿದೆ.

ಬಸವಣ್ಣನ ಅಸ್ತಿತ್ವದಲ್ಲಿ ತನ್ನ ಅಸ್ತಿತ್ವವನ್ನು ಕಂಡವಳು ನೀಲಾಂಬಿಕೆ. ಹೆಣ್ತನದ ಸಹಜ ಭಾವನೆಗಳಿಂದ ಬಸವಣ್ಣನಿಲ್ಲದ ಬದುಕು ಶೂನ್ಯವಾಯಿತು ಎಂಬ ನಿರಾಶಾಭಾವ ಕಾಡಿದೆ. ವಿರಹಭಾವದ ಪ್ರಲಾಪಗಳಲ್ಲಿ ಆಕೆಯ ದುಃಖ ಮೇರೆವರಿದು ಶೋಕಗ್ರೈದಿದ್ದಾಳೆ.

ಸಂಗಯ್ಯನಲ್ಲಿ ಬಸವನಡಗಲು ಎನ್ನ ಕಾಯವೆ ತೃಣರೂಪವಯ್ಯ ಎಂದು ಪತಿ, ಗುರು ಬಸವಣ್ಣನು ಲಿಂಗೈಕ್ಯನಾದ ಮೇಲೆ ಈ ಜಗತ್ತಿನಲ್ಲಿ ತನ್ನ ಇರುವಿಕೆ ತೃಣಸಮಾನ ಎಂಬ ಜೀವನ ನಿಕೃಷ್ಟತೆಯ ಭಾವ ತುಂಬಿದೆ. ಸಾಂಪ್ರದಾಯಿಕ ಸ್ತ್ರೀಯ ನಿಲುವನ್ನೇ ಮೆರೆಯುವ ನೀಲಲೋಚನೆ ಮರಳಿ "ಹೆಣ್ಣಾಗಿ" ಪತಿಯಲ್ಲದೆ ಅರ್ಥಹೀನ ಬದುಕಿನ ಸ್ಥಿತಿಯ ಹೆಣ್ತನದಿಂದ ಶೋಕಿಸುವುದನ್ನು ಕಂಡಾಗ ಆಕೆ ಸಾಧನೆಯ ಎತ್ತರದಿಂದ ಆ ಕ್ಷಣಕ್ಕೆ ಕೆಳಗಿಳಿದು ಸಾಧಾರಣ ಸ್ತ್ರೀಯಾಗಿದ್ದಾಳೆ. ಆದರೆ ಮರುಕ್ಷಣದಲ್ಲಿ ಸಾವರಿಸಿಕೊಂಡರೂ ಆಕೆಯ ಶೋಕ ಲೌಕಿಕ ಸ್ಥಿತಿಯೇ ಆಗಿದೆ.

"ನಾನರ ಹೆಸರ ಕುರುಹಿಲಯ್ಯಾ ಬಸವಾ,
ನಾನರ ರೂಪ ನಿಜವಿಡಲಯ್ಯ ಬಸವಾ,
ನಾನರ ಮಾತ ನೆಲೆಗೊಳಿಸಲಯ್ಯಾ ಬಸವಾ,
ಎನ್ನ ಸುಖಾಕಾರ ಮೂರ್ತಿ ಬಸವನಡಗಿದ ಬಳಿಕ ಎನಗೆ ಹೆಸರಿಲ್ಲ
ರೂಪು-ನಿರೂಪವಾಯಿತಯ್ಯಾ ಸಂಗಯ್ಯ ಬಸವನಡಗಿದ ಬಳಿಕ". [೧೨]

ಹೀಗೆ ನೀಲಾಂಬಿಕೆಯ ಮನಸ್ಸು ಬಸವಣ್ಣನ ಅಗಲಿಕೆಯ ತೀವ್ರವಾದ ನೋವಿನಿಂದ ನಾನಾ ವಿಧವಾಗಿ ಅಳಲುತ್ತಿದೆ. ಬಸವಣ್ಣನಿಲ್ಲದೆ ಯಾರನ್ನು ತಾನು ಬಸವಾ ಎಂದು ಸಂಭೋದಿಸಲಿ. ಅವನ ರೂಪು ನಿರೂಪವಾಗಿದೆಯಲ್ಲಾ ಎಂಬ ವ್ಯಥೆ ಮಿತಿ ಮೀರುತ್ತದೆ.

ಬಸವಣ್ಣನನ್ನು ಅಗಲಿ ಬದುಕುವುದು ಅಸಾಧ್ಯವೆನಿಸಿದಾಗ ನೀಲಾಂಬಿಕೆ ಆತನ ಬಗ್ಗೆ ಅನೇಕ ಆಕ್ಷೇಪಣೆಗಳು ಹುಸಿ ಮುನಿಸಾಗಿ ಪ್ರಶ್ನೆಯಾಗಿ ಹೀಗೆ ಹೊಮ್ಮುತ್ತವೆ.

"ಅಟ್ಟಡವಿಯಲ್ಲಿ ಬಿಟ್ಟು ಹೋದಿರಿ ಬಸವಯ್ಯಾ
ನಟ್ಟನಡು ಗ್ರಾಮವ ಕೆಡಿಸಿ ಹೋದಿರಿ ಬಸವಯ್ಯಾ
ಹುಟ್ಟಿಲ್ಲದ ಬಂಜೆಗೆ ಮಕ್ಕಳ ಕೊಟ್ಟಿರಿ ಬಸವಯ್ಯಾ
ಆ ಮಕ್ಕಳ ಫಲವಿಲ್ಲದಂತೆ ಮಾಡಿದಿರಿ ಬಸವಯ್ಯಾ
ಸಂಗಯ್ಯನಲ್ಲಿ ನೀನೆಂತಪ್ಪ ಮಹಿಮನಯ್ಯಾ ಬಸವಯ್ಯಾ." [೧೩]

ಪತಿಯ ಅಗಲಿಕೆ, ಒಂಟಿತನ ಅನಾಥ ಪ್ರಜ್ಞೆಯನ್ನು ಮೂಡಿಸಿದೆ. ತಮ್ಮಿಬ್ಬರ ಅನ್ಯೋನ್ಯತೆ, ಸಂಬಂಧದ ಲೌಕಿಕ ಅರ್ಥವನ್ನು ವಿಶ್ಲೇಷಿಸುವಾಗ ಹುಟ್ಟಿಲ್ಲದ ಬಂಜೆಗೆ ಮಕ್ಕಳನ್ನು ಕೊಟ್ಟು ಮಾತೃತ್ವದ ಅರ್ಥವನ್ನು ಅರಿವಾಗಿಸಿದವನು. ತನ್ನದೇ ಕರುಳ ಕುಡಿಗೆ ಮಾತೃ ವಾತ್ಸಲ್ಯವನ್ನು ಹಂಚಲು ಎಡೆ ನೀಡಿದವನೆಂದು ಪತಿಯ ಬಗ್ಗೆ ಅಪಾರ ಪ್ರೀತಿ ತುಂಬಿ ಬಂದಿದೆ. ಆದರೆ ಆ ಮಕ್ಕಳ ಫಲವಿಲ್ಲದಂತೆ ಮಗುವಿನ ಸಾವು ಉಂಟಾಗಿ ಅವಳನ್ನು ಕಂಗೆಡಿಸಿದೆ.

ಹಾಗೆ ಆದಾಗ ಅವಳ ಮನಸ್ಸಿನಲ್ಲಿ ದುಃಖ ಮಡುಗಟ್ಟಿತು. ಇಷ್ಟೆಲ್ಲಾ ಫಲನೀಡಿ ಅದು ದಕ್ಕದೆ ಹೋದಾಗ ಅವಳ ಅಳಲಿನ ಕಡಲುಕ್ಕಿತು. ಇದನ್ನು ತಡೆಯಲಾರದೆ ನೀನೆಂತಹಾ ಮಹಿಮನಯ್ಯ ನನ್ನ ದುಃಖಕ್ಕೆ ಪಾರವೇ ಇಲ್ಲದಂತೆ ಮಾಡಿಬಿಟ್ಟೆ ಎಂದು ಆಕ್ಷೇಪಿಸುವ ವಾಸ್ತವತೆಯ ಲೌಕಿಕ ನೆಲೆಗೆ ಬಂದುದಲ್ಲಿ ಉಂಟಾದಾಗಿನ ಮನದ ಅಳಲನ್ನೆಲ್ಲಾ ಹೊರಗೆಡವಿ ನಿರಾಳವಾಗಲು ಪ್ರಯತ್ನಿಸಿದ್ದಾಳೆ. ಇಲ್ಲಿ ಹೆಣ್ಣಿನ ಅಸಹಾಯಕತೆಯ ಪ್ರತಿಬಿಂಬವಾಗಿ ನೀಲಮ್ಮನ ಅಭಿವ್ಯಕ್ತಿಯಿದೆ. ದುಃಖ ತೀವ್ರ ತಳಮಳ ಅವಳಲ್ಲಿ ಆಂತರ್ಯದ ನೋವೆಲ್ಲಾ ಹೊರಹೊಮ್ಮುವಂತೆ ಮಾಡಿದೆ. ಭವವಿರೇಚನವಾಗುವ ಮೂಲಕ ಆತ್ಮಶುದ್ಧಿಯಿಂದ ಮತ್ತಷ್ಟು ಪರಿಪಕ್ವಗೊಂಡು ನೀಲಾಂಬಿಕೆಯಲ್ಲಿ 'ಬಸವ' ನಾಮಸ್ಮರಣೆ ಆತ್ಮಾನುಸಂಧಾನಕ್ಕೆ ಎಡೆ ನೀಡಿದೆ. ಬಸವ ತೇಜದ ಬೆಳಕು ಹರಿದಂತೆ ಭ್ರಮೆಯಲ್ಲ ಹರಿದು ಹೋಗಿದೆ.

> "ಎನಗೆ ಇಲ್ಲಿ ಏನು ಬಸವ ಬಸವಾ
> ಎನಗೆ ಅದರ ಕುರುಹೇನು ಬಸವಾ?
> ಎನಗೆ ಬಸವ ನಡೆದ ಭಕ್ತಿಸ್ಥಲದಲ್ಲಿ ನಿಂದು,
> ಭಕ್ತಿಸ್ಥಲ ಬಸವನಲ್ಲಿ ಕುರುಹಳಿದು,
> ನಾನು ಬಸವನ ಶ್ರೀಪಾದದಲ್ಲಿ
> ಉರಿಯುಂಡ ಕರ್ಪೂರದಂತಡಗಿದ ಬಳಿಕ ಸಂಗಯ್ಯಾ." [೧೪]

ಬಸವಣ್ಣನಿಲ್ಲದೆ ಈ ಲೋಕದಲ್ಲಿ ತನಗಾವ ಕಾರ್ಯಗಳೂ ಉಳಿದಿಲ್ಲ. ತಾನೇನು ಮಾಡಬೇಕು ಎಂಬುದು ತಿಳಿಯದೆ "ಏನು ಬಸವಾ? ಎನಗೆ ಇಲ್ಲಿ ಏನು ಕೆಲಸ ಬಸವಾ? ಕೆಲಸವಿದೆ ಎನ್ನವ ಕುರುಹುಗಳು ಇಂದಿನ ವಸ್ತು ಪರಿಸ್ಥಿತಿಯಲ್ಲಿ ಕಾಣುತ್ತಿಲ್ಲ ಎನ್ನುವ ನೀಲಾಂಬಿಕೆಗೆ ಆತ ಕೇವಲ ಪತಿಯಲ್ಲ, ಪ್ರೇಮಿ ಮಾತ್ರವಲ್ಲ, ಆಧ್ಯಾತ್ಮ ಗುರುವೂ ಹೌದು, ಶಿವನಿಗೆ ಪರ್ಯಾಯವೂ ಹೌದು. ಕಡೆಗೆ ಆತನೇ ಪ್ರತ್ಯಕ್ಷ ಪರಶಿವ ಕೂಡ. ತನ್ನಾತ್ಮ ತೃಪ್ತಿ ಕಂಡಂತೆಲ್ಲ ನೀಲಮ್ಮ ಹಲವಾರು ವಚನಗಳಲ್ಲಿ ಅದಕ್ಕೆ ಅಭಿವ್ಯಕ್ತಿಯನ್ನು ಕೊಡುತ್ತಾ ಸಾಗಿದ್ದಾಳೆ. ಅವರ ಸಂಬಂಧ ಲೌಕಿಕ ಸಂಬಂಧದ ವಸ್ತು ಸ್ಥಿತಿಯನ್ನು ಸತಿಪತಿಭಾವವನ್ನು ಮೀರಿದ್ದು ಆಧ್ಯಾತ್ಮ ಪರಾಕಾಷ್ಠೆಯಲ್ಲಿ ಯಶಸ್ಸು ಪಡೆದಿದೆ. ಆದ್ದರಿಂದ ಬಸವನ ಭಕ್ತಿ ಸ್ಥಲದ ಮಾರ್ಗದಲ್ಲಿಯೇ ಸಾಧನೆ ಮಾಡಿ ಅದರಲ್ಲಿಯೇ ಪೂರ್ಣ ಸಾಧನೆಯಿಂದ ಬಯಲಾದಂತೆ ತಾನು ತನ್ನಾರಾಧ್ಯ ಗುರು ಬಸವನ ಶ್ರೀಪಾದದಲ್ಲಿ ಬಯಲಾಗುವ ಬಯಕೆ ಹೊಂದಿದ್ದಾಳೆ. ಇಲ್ಲಿ ನೀಲಾಂಬಿಕೆಯ ಅಪೇಕ್ಷೆ ಸಾಂಪ್ರದಾಯಿಕ ಸ್ತ್ರೀತ್ವದ

ಪರಿಧಿಯನ್ನು ಮೀರಿದ ಅಲೌಕಿಕದ ಗುರು–ಶಿಷ್ಯ ಸಂಬಂಧದಲ್ಲಿ ಬೆಳೆದು, ಕಡೆಗೆ ಆ ಪರಮ ಗುರುವಿನಲ್ಲಿ ಉರಿಯುಂಡಂತೆ ಐಕ್ಯಳಾಗಲು ಬಯಸಿದ್ದಾಳೆ.

"ಎಲೆ ಅಯ್ಯಾ ಬಸವಾ ಕರಸ್ಥಲ ಬಯಲಾಯಿತ್ತೆನಗೆ
ಕರಸ್ಥಲ ಮನಸ್ಥಲವಾಯಿತು ಬಸವಾ
ಸಂಗಯ್ಯ ಬಸವ ಹೋದನತ್ತ ನಾನಡಗಿದೆನಯ್ಯಾ ನಿಮ್ಮಲಿತ್ತ" [೧೫]

ಸಂಗಯ್ಯನಲ್ಲಿ ಒಂದಾಗುವ ನಿಲುವಿನ ಅವಳ ವ್ಯಕ್ತಿತ್ವವು ನಿಶ್ಶೂನ್ಯಡೆಗೆ ನಡೆದ ಪಯಣದಂತಿದೆ. ಮೊದಲು ಬಸವಣ್ಣನಲ್ಲಿ ಸಂಗಯ್ಯನನ್ನು ಕಂಡೆ ಎನ್ನುವ ನೀಲಾಂಬಿಕೆ, ಅಂತಿಮವಾಗಿ ಸಂಗಯ್ಯನಲ್ಲಿ ಬಸವಣ್ಣನನ್ನು ಕಾಣುತ್ತಿರುವ ಅತ್ಯಂತಿಕ ಭಾವದೆಡೆಗೆ ಪರಿವರ್ತಿತಳಾಗಿದ್ದಾಳೆ. ಇದು ಅವಳ ವ್ಯಕ್ತಿತ್ವದ ವಿಕಾಸವೇ ಆಗಿದೆ.

"ಎನಗೇನೆಂಬೆನೆಂಬ ಸಂದೇಹ ಹರಿಯಿತ್ತು
ಆ ಸಂದೇಹ ಹರಿದು
ಅಪ್ರಮಾಣದೊಳಗೆ ಐಕ್ಯವಾದೆನಯ್ಯ ನಾನು
ಆನು ಅನುಭವ ಸುಖಿಯಾಗಿ
ಆ ಸುಖ ತೃಪ್ತಿಯ ಕಂಡು
ಬಯಲ ಸುಖವನುಂಡೆನಯ್ಯ ಬಸವಯ್ಯ
ಸಂಗಯ್ಯ ನಾನು ಮುಕ್ತಾಂಗನೆಯಾದೆನು." [೧೬]

ಹೀಗೆ ಬಸವನು ಸಂಗಮದಲ್ಲಿ ಐಕ್ಯಗೊಂಡ ಸುದ್ದಿ ತಿಳಿದು ನಿಶ್ಶೂನ್ಯಳಾಗುತ್ತಾಳೆ. ಶಿವಪೂಜೆ ಮಾಡುತ್ತಾ ಅಂಗೈಮೇಲಿನ ಇಷ್ಟಲಿಂಗವೇ ಪ್ರತ್ಯಕ್ಷ ಬಸವಣ್ಣನೆಂದರಿತು ಯೋಗ ಸಮಾಧಿಯಿಂದ ತನ್ನ ಇಷ್ಟಲಿಂಗದಲ್ಲಿ ದೃಷ್ಟಿ ಹರಿಸಿ ಕುಳಿತಲ್ಲಿಯೇ ನಿರವಯಲನು ಹೊಂದುತ್ತಾಳೆ. ಹೀಗೆ ಇಚ್ಛಾ ಮರಣಿಯಾಗಿ ಬಯಲೊಳಗೆ ಬಯಲಾಗುವಳು. ಮುಕ್ತ್ಯಂಗನೆಯೇ ಆದ ಶಿವಶರಣೆ ನೀಲಾಂಬಿಕೆಯದು ಅನುಪಮ ಜೀವನ. ವಿಜಾಪುರ ಜಿಲ್ಲೆ ಮುದ್ದೆ ಬಿಹಾಳ ತಾಲ್ಲೂಕಿನ ಕಪ್ಪಡಿಯ ಮಾರ್ಗ ಮಧ್ಯದ ತಂಗಡಿಯಲ್ಲಿ ನೀಲಮ್ಮನ ಸಮಾಧಿ ಹಾಗೂ ದೇವಾಲಯಗಳು ಇವೆ.

ನೀಲಲೋಚನೆಯ ವ್ಯಕ್ತಿತ್ವದಲ್ಲಿ ಆಕೆಯ ವಿಚಾರಪರತೆಯಷ್ಟೆ ಭಾವುಕತೆಯೂ ಪ್ರಮುಖವಾಗಿ ವ್ಯಕ್ತವಾಗುತ್ತದೆ. ತನ್ನ ಆಧ್ಯಾತ್ಮಿಕ ಚಿಂತನೆಗಳಲ್ಲಿ, ವ್ಯಕ್ತಿತ್ವದ ವಿಕಾಸ ಸಾಧನೆಯಲ್ಲಿ ವಿಚಾರಪರತೆಯನ್ನು ಪ್ರಧಾನವಗಿ ಹರಿತಗೊಳಿಸಿ ಕೊಂಡಿದ್ದು ಪ್ರಮುಖವಾದದ್ದು. ಆದರ ಆಕೆ 'ಭಾವುಕ ಸತಿ' ಆಗಿರುವುದರಿಂದ ಬಸವಣ್ಣನ ಬಗ್ಗೆ ಬಸವ ಪ್ರೀತಿ ಮೈತುಂಬಿ ಬಂದಿದೆ. ಬಸವಣ್ಣನವರು ವಿಚಾರ ಪರರಾದಷ್ಟೇ ಭಕ್ತಿಯಲ್ಲಿ ಭಾವುಕ ಸಮಭಾವ, ಸಮಕಳೆ, ಸಮಾಧಾನಗಳ ಸಮ್ಯಕ್ ವ್ಯಕ್ತಿತ್ವಗಳಾಗಿ ಸರಿಜೋಡಿಯಾಗಿ ಅರಳಿವೆ. ಸಂಸಾರ ಆಧ್ಯಾತ್ಮಗಳ ಸಮನ್ವಯ ಸಾಧಕ. ಆಧ್ಯಾತ್ಮಿಕ ಉನ್ನತಿ ಪಡೆದ ಬಸವಣ್ಣ ಲೌಕಿಕದಲ್ಲಿ ತುಂಬಿ ಸಂಸಾರಿ, ರಾಜಕೀಯದಲ್ಲಿ, ಸಮಾಜದಲ್ಲಿ ತನ್ನ ಸುಧಾರಣಾಪರ ನೀತಿಗಳಿಂದ,

ಅನುಭವ ಮಂಟಪದಲ್ಲಿ ಅದರ ವಿಮರ್ಶೆಗಳಿಂದ ವೈಚಾರಿಕತೆಯ ಉತ್ತುಂಗದಲ್ಲಿ ವ್ಯವಹರಿಸುತ್ತಿದ್ದ ಬಸವಣ್ಣ ಮಹಾಮನೆಯಲ್ಲಿ ಸದ್ಗೃಹಸ್ಥನ ಹೊಣೆಯಿಂದ ನಡೆದುಕೊಳ್ಳುತ್ತಿದ್ದರು. ಸಂಸಾರವೆಂಬುದರ ಮಹತ್ವ ಅರಿತ ರಸಿಕತೆಯಿಂದ ನೀಲಲೋಚನೆಯನ್ನು 'ಪೃಥ್ವಿಗಿಳಿದ ಚೆಲುವೆ' ಎಂದು ಬಣ್ಣಿಸುತ್ತಿದ್ದು ಸುಂದರ ಸಂಸಾರ ಸಾರವನ್ನು ಸವಿದರೂ ಏಕಕಾಲದಲ್ಲಿ ಜೀವನದ ನಶ್ವರತೆ ಅರಿತ ಯೋಗಿಯೂ ಆಗಿದ್ದರು. ಇಂತಹ ಬಸವಣ್ಣನ ಮೂರ್ತರೂಪವನ್ನು ಸಂಗಯ್ಯನೆಂದೇ ಭಾವಿಸಿ ಒಂದಾದ ಭಾವೋತ್ಕಟತೆಯಲ್ಲಿ ಆಕೆಯ ಸಂಭ್ರಮವಿದೆ. ಆತನ ದಾಸೋಹದ ವ್ರತದಲ್ಲಿ ಸಹಕರಿಸಿದ ಮೆಚ್ಚಿನ ಮಡದಿ ಆತ್ಮಿಕವಾಗಿ ಮುನ್ನಡೆದು ಆತ್ಮ ಶಾಂತಿಯನ್ನು ನೀಡಿ ಗೌರವಾರ್ಹಳೂ ಆಗಿದ್ದಳು.

ಹೀಗೆ ಗಂಗಾಂಬಿಕೆ, ನೀಲಾಂಬಿಕೆಯರು ಬಸವ ವೃಕ್ಷವನ್ನು ಸುತ್ತಿದ ಬಳ್ಳಿಗಳಾಗಿದ್ದರು. ಒಬ್ಬಳು ಆಚಾರ ಪತ್ನಿ, ಇನ್ನೊಬ್ಬಳು ವಿಚಾರ ಪತ್ನಿಯರಾಗಿ ಶರಣರ ವಿಶಿಷ್ಟ ದಾಂಪತ್ಯ ಮಾದರಿಗಳಾಗಿದ್ದಾರೆ. ಶಿವಯೋಗ ಸಾಧನೆಯಿಂದ ಶರಣೆಯರಾಗಿ, ಸತಿಪತಿಭಾವ, ತಾಳ್ಮೆ, ಭಕ್ತಿ, ವಿನಯ, ಧೈರ್ಯ, ತ್ಯಾಗ, ಸಾಮರ್ಥ್ಯಗಳ ಸಮರ್ಪಣಾ ಭಾವದ ಮೌಲ್ಯಗಳ ವಿಶಿಷ್ಟ ಆಚರಣೆಯಿಂದ ಶರಣ ಸಮೂಹದಲ್ಲಿ ಗೌರವಾನ್ವಿತರಾಗಿದ್ದಾರೆ. ಹೆಣ್ಣೆಂದರೆ ಭೋಗವಸ್ತುವಲ್ಲ, ತನ್ನದೇ ಆದ ವಿಚಾರ ಸ್ವಾತಂತ್ರ್ಯ ವ್ಯಕ್ತಿತ್ವದ ಅನನ್ಯತೆಗಳು ಎಂಬುದನ್ನು ನುಡಿದಂತೆ ನಡೆದ ಛಲಗಾರ್ತಿಯರು ಅಂದು ಶ್ರುತಪಡಿಸಿದ್ದಾರೆ.

## ಕೊನೆ ಟಿಪ್ಪಣಿ

೧. ಫ.ಗು. ಹಳಕಟ್ಟಿ, ಶಿವಶರಣೆಯರ ಚರಿತ್ರೆ. ಪುಟ.೧೩೬.

೨. ಡಾ. ವಿಜಯಶ್ರೀ ಸಬರದ ವಚನಾಮೃತ. ಪುಟ. ೭೫.

೩. ಶಿವಶರಣೆಯರ ವಚನ ಸಂಪುಟ-೫ ಸಂಪಾದಕ ಡಾ. ವೀರಣ್ಣ ರಾಜೂರ, ಕರ್ನಾಟಕ ಸರ್ಕಾರ, ಕನ್ನಡ ಪುಸ್ತಕ ಪಾಧಿಕಾರ. ಬೆಂಗಳೂರು -೨೦೦೧ ವ.೧೭೬. ಪುಟ.೨೯೭.

೪. ವಚನ ಸಾಹಿತ್ಯ ಮಾಲಿಕೆ - ೮೨. ಗಂಗಾಂಬಿಕೆ - ನೀಲಾಂಬಿಕೆ. ಡಾ. ಕೆ.ಎಸ್. ರತ್ನಮ್ಮ. ಪ್ರಕಾಶಕರು ಅಖಿಲ ಕರ್ನಾಟಕ ವಚನ ಸಾಹಿತ್ಯ ಪರಿಷತ್ತು. ಮೈಸೂರು.೨೦೦೯. ಪುಟ- ೩೮.

೫. ಸಮಗ್ರ ವಚನ ಸಂಪುಟ - ೫. ಶಿವಶರಣೆಯರ ವಚನ ಸಂಪುಟ ಸಂಪಾದಕ ಡಾ. ವೀರಣ್ಣ ರಾಜೂರ, ಕರ್ನಾಟಕ ಸರ್ಕಾರ, ಕನ್ನಡ ಪುಸ್ತಕ ಪ್ರಾಧಿಕಾರ. ಬೆಂಗಳೂರು -೨೦೦೧. ವ. ೫೭. ಪುಟ.೨೭೧.

೬. ಸಮಗ್ರ ವಚನ ಸಂಪುಟ - ೫. ಶಿವಶರಣೆಯರ ವಚನ ಸಂಪುಟ ಸಂಪಾದಕ ಡಾ. ವೀರಣ್ಣ ರಾಜೂರ, ಕರ್ನಾಟಕ ಸರ್ಕಾರ, ಕನ್ನಡ ಪುಸ್ತಕ ಪ್ರಾಧಿಕಾರ. ಬೆಂಗಳೂರು -೨೦೦೧. ವಚನ. ೨೬೧ ಪುಟ.೩೧೫.

೭. ಸಮಗ್ರ ವಚನ ಸಂಪುಟ - ೫. ಶಿವಶರಣೆಯರ ವಚನ ಸಂಪುಟ ಸಂಪಾದಕ ಡಾ. ವೀರಣ್ಣ ರಾಜೂರ, ಕರ್ನಾಟಕ ಸರ್ಕಾರ, ಕನ್ನಡ ಪುಸ್ತಕ ಪ್ರಾಧಿಕಾರ. ಬೆಂಗಳೂರು -೨೦೦೧. ವ. ೪೭. ಪುಟ.೨೬೬.

೮. ವಚನ ಸಾಹಿತ್ಯ ಮಾಲಿಕೆ - ೮೨. ಗಂಗಾಂಬಿಕೆ - ನೀಲಾಂಬಿಕೆ. ಡಾ. ಕೆ.ಎಸ್. ರತ್ನಮ್ಮ. ಪ್ರಕಾಶಕರು ಅಖಿಲ ಕರ್ನಾಟಕ ವಚನ ಸಾಹಿತ್ಯ ಪರಿಷತ್ತು. ಮೈಸೂರು.೨೦೦೯. ಪುಟ.೪೧.

೯. ಸಮಗ್ರ ವಚನ ಸಂಪುಟ - ೫. ಶಿವಶರಣೆಯರ ವಚನ ಸಂಪುಟ ಸಂಪಾದಕ ಡಾ. ವೀರಣ್ಣ ರಾಜೂರ, ಕರ್ನಾಟಕ ಸರ್ಕಾರ, ಕನ್ನಡ ಪುಸ್ತಕ ಪ್ರಾಧಿಕಾರ. ಬೆಂಗಳೂರು -೨೦೦೧. ವ. ೯೩. ಪುಟ.೨೭೯.

೧೦. ಸಮಗ್ರ ವಚನ ಸಂಪುಟ - ೫. ಶಿವಶರಣೆಯರ ವಚನ ಸಂಪುಟ ಸಂಪಾದಕ ಡಾ. ವೀರಣ್ಣ ರಾಜೂರ, ಕರ್ನಾಟಕ ಸರ್ಕಾರ, ಕನ್ನಡ ಪುಸ್ತಕ ಪ್ರಾಧಿಕಾರ. ಬೆಂಗಳೂರು -೨೦೦೧. ವ. ೧೦೦. ಪುಟ.೨೮೦.

೧೧. ಮಹಾಶರಣೆ ನೀಲಾಂಬಿಕೆ. ಪ್ರೊ.ಎಸ್.ಎಸ್. ಭೂಸರೆಡ್ಡಿ. ಪ್ರಕಾಶಕರು ಸಾಹಿತ್ಯಸಮಿತಿ, ಲಿಂಗಾಯಿತ ವಿದ್ಯಾಭಿವೃದ್ಧಿ ಸಂಸ್ಥೆ, ಧಾರವಾಡ – ೧೯೮೨. ಪುಟ. ೩೭.

೧೨. ಸಮಗ್ರ ವಚನ ಸಂಪುಟ – ೫. ಶಿವಶರಣೆಯರ ವಚನ ಸಂಪುಟ ಸಂಪಾದಕ ಡಾ. ವೀರಣ್ಣ ರಾಜೂರ, ಕರ್ನಾಟಕ ಸರ್ಕಾರ, ಕನ್ನಡ ಪುಸ್ತಕ ಪ್ರಾಧಿಕಾರ. ಬೆಂಗಳೂರು –೨೦೦೧. ವ. ೧೮೦. ಪುಟ.೨೯೭.

೧೩. ನೀಲಮ್ಮನ ವಚನಗಳು, ಸಂಪಾದಕ: ಡಾ.ಸಾ.ಶಿ. ಮರುಳಯ್ಯ, ಎಸ್. ಶಿವಣ್ಣ, ಬಸವ ಸಮಿತಿ, ಬಸವೇಶ್ವರ ವೃತ್ತ, ಬೆಂಗಳೂರು..೧೯೯೩. ಪುಟ ೪೧.

೧೪. ಸಮಗ್ರ ವಚನ ಸಂಪುಟ – ೫. ಶಿವಶರಣೆಯರ ವಚನ ಸಂಪುಟ ಸಂಪಾದಕ ಡಾ. ವೀರಣ್ಣ ರಾಜೂರ, ಕರ್ನಾಟಕ ಸರ್ಕಾರ, ಕನ್ನಡ ಪುಸ್ತಕ ಪ್ರಾಧಿಕಾರ. ಬೆಂಗಳೂರು –೨೦೦೧. ವ.೭೪. ಪುಟ.೨೭೫.

೧೫. ಸಮಗ್ರ ವಚನ ಸಂಪುಟ – ೫. ಶಿವಶರಣೆಯರ ವಚನ ಸಂಪುಟ ಸಂಪಾದಕ ಡಾ. ವೀರಣ್ಣ ರಾಜೂರ, ಕರ್ನಾಟಕ ಸರ್ಕಾರ, ಕನ್ನಡ ಪುಸ್ತಕ ಪ್ರಾಧಿಕಾರ. ಬೆಂಗಳೂರು –೨೦೦೧. ವ. ೯೬. ಪುಟ.೨೮೦.

೧೬. ಸಮಗ್ರ ವಚನ ಸಂಪುಟ – ೫. ಶಿವಶರಣೆಯರ ವಚನ ಸಂಪುಟ ಸಂಪಾದಕ ಡಾ. ವೀರಣ್ಣ ರಾಜೂರ, ಕರ್ನಾಟಕ ಸರ್ಕಾರ, ಕನ್ನಡ ಪುಸ್ತಕ ಪ್ರಾಧಿಕಾರ. ಬೆಂಗಳೂರು –೨೦೦೧. ವ. ೮೩. ಪುಟ.೨೭೭.

## ೩ : ೮. ಸೂಳೆ ಸಂಕವ್ವ

ಹನ್ನೆರಡನೆಯ ಶತಮಾನದ ಶಿವಶರಣೆಯರಲ್ಲಿ ಅತ್ತ ವಿವಾಹಿತರೂ ಅಲ್ಲದ, ಇತ್ತ ಸಂಸಾರಿಗಳೂ ಅಲ್ಲದ ಕೆಲವು ಮಹಿಳೆಯರು ಕಾಣಸಿಗುತ್ತಾರೆ. ಇಂಥ ಮಹಿಳೆಯರು ಉದಾರವಾದಿ ಸಮಾಜದ ಹೆಗ್ಗುರುತಾಗಲು ಸಾಧ್ಯವಿಲ್ಲ ಎಂಬಂತಹ ಸಂದರ್ಭದಲ್ಲೂ ವೇಶ್ಯೆ, ಸೂಳೆ ಎಂಬ ಪಟ್ಟಕಟ್ಟಿಕೊಂಡು ಕೂಡ ಸಾತ್ವಿಕವಾಗಿ ಬದುಕಿದವರಾಗಿದ್ದಾರೆ. ಶರಣಧರ್ಮವು ಇಂಥ ಮಹಿಳೆಯರನ್ನು ಒಪ್ಪಿಕೊಂಡುದು ದಿಟ್ಟತನದ ನಿಲುವಾಗಿದೆ. ತಮ್ಮ ಲೌಕಿಕ ಹಂಬಲವನ್ನು ಮೀರಿ ವೀರಶೈವದ ಆಧ್ಯಾತ್ಮಿಕದ ಮೆಟ್ಟಿಲ್ಲನ್ನು ಏರಿ, ಉತ್ಕೃಷ್ಟ ವಚನಗಳನ್ನು ರಚಿಸಿದ ಈ ಮಹಿಳೆಯರು ಜಗತ್ತಿನ ವಿಸ್ಮಯ ಸಂಗತಿಗಳಲ್ಲಿ ಒಂದಾಗುತ್ತಾರೆ. ಅಂಥವರ ಸಾಲಿನಲ್ಲಿ ಕಾಯಕ ಜೀವಿ ಸೂಳೆ ಸಂಕವ್ವೆಯೂ ಒಬ್ಬಳಾಗಿದ್ದಾಳೆ.

"ಮಲ್ಲಿಕಾರ್ಜುನ ಸಹಸ್ರಗಣ ನಾಮದಲ್ಲಿ ಸೂಳೆ ಬೊಮ್ಮಲದೇವಿ, ಸೂಳೆ ಪದ್ಮಲದೇವಿ, ಸೂಳೆ ಕಾಮಲದೇವಿಯರ ಜೊತೆಗೆ ಸೂಳೆ ಸಂಕಲದೇವಿಯ ಹೆಸರೂ ಬರುತ್ತದೆ. ಸಂಕವ್ವೆಯ ಇನ್ನೊಂದು ಹೆಸರು ಸಂಕಲದೇವಿಯಾಗಿರಬೇಕು. ಈಕೆ ಬದುಕಿದ ಕಾಲ ಸುಮಾರು ೧೧೬೦. ತನ್ನ ಗಂಡನ ಹೆಸರನ್ನು ಎಲ್ಲಿಯೂ ಉಲ್ಲೇಖಿಸದ ಸಂಕವ್ವೆ ಅವಿವಾಹಿತೆಯಾಗಿದ್ದು ಸೂಳೆಗಾರಿಕೆಯ ವೃತ್ತಿಯನ್ನು ಅವಲಂಬಿಸಿದ್ದಳು."[೧] ಈಕೆಯ ದೊರೆತಿರುವ ಒಂದೇ ಒಂದು ವಚನವನ್ನು ಬಿಟ್ಟರೆ ಮತ್ತೆ ಯಾವ ಹೆಚ್ಚಿನ ವಿಷಯಗಳೂ ತಿಳಿದು ಬಂದಿಲ್ಲ.

ಸಂಕವ್ವೆಯ ವಚನದ ಅಂಕಿತ 'ನಿರ್ಲಜ್ಜೇಶ್ವರ' ಎಂದಿದೆ. ಆಕೆಯ ವೃತ್ತಿಗೆ ಆಕೆಯ ದೈವದ ಹೆಸರೂ ಪೂರಕವಾಗಿರುವುದು ಗಮನಾರ್ಹ ಮತ್ತು ಅರ್ಥಪೂರ್ಣ. "ನಿರ್ಲಜ್ಜೇಶ್ವರ ಎಂಬುದು ಸ್ಥಾವರವಾಗಿರಲಾರದು. ಅದು ಸಂಕವ್ವೆಯ ಭಾವಲಿಂಗವೇ'.[೨] ಸಾಮನ್ಯವಾಗಿ ಸೂಳೆಯನ್ನು ಲಜ್ಜೆಗೆಟ್ಟವಳು ಎಂದೇ ಸಮಾಜ ಗುರುತಿಸುತ್ತಿದೆ. 'ಸೂಳೆ' ಈ ಅರ್ಥದಲ್ಲಿ ನಿರ್ಲಜ್ಜೆ. ಈ ನಿರ್ಲಜ್ಜೆಯ + ಈಶ್ವರ ಅಂದರೆ ಸಂಕವ್ವೆಯ ಭಾವದೊಡೆಯ ನಿರ್ಲಜ್ಜೇಶ್ವರನಾಗುತ್ತಾನೆ. ಈ ಹಿನ್ನೆಲೆಯಲ್ಲಿ ಈ ಶರಣೆಯ ಅಂಕಿತ ನಿರ್ಲಜ್ಜೇಶ್ವರ ಎಂಬುದು ಕೂಡ ದೃಢಪಡುತ್ತದೆ. ಇದು ವೃತ್ತಿ ಕಳಂಕಿತ ಮಹಿಳೆ ವೀರಶೈವ ಭಕ್ತಿ ಚಳುವಳಿಯಲ್ಲಿ ತನ್ನ ಬದುಕಿನ ಸಾರ್ಥಕತೆಯನ್ನು ಕಂಡುಕೊಂಡ ರೀತಿಯಾಗಿದೆ. ಸ್ವತಂತ್ರ ಜೀವನ ವಿಧಾನವಾಗಿದೆ.

ತಾನು ನಂಬಿದ ದೈವದೊಡನೆ ಭಾಷೆ ನುಡಿಯುವ ಸಂಕವ್ವೆ ತನ್ನ ವಚನದಲ್ಲಿ ವೃತ್ತಿ ಜೀವನದ ವ್ರತನಿಷ್ಠೆಯನ್ನು ಹಾಸುಹೊಕ್ಕಾಗಿಸಿದ್ದಾಳೆ. ಆ ವಚನ ಹೀಗಿದೆ.

" ಒತ್ತೆಯ ಹಿಡಿದು ಮತ್ತೊತ್ತೆಯ ಹಿಡಿಯೆ
ಹಿಡಿದಡೆ ಬತ್ತಲೆ ನಿಲಿಸಿ ಕೊಲುವರಯ್ಯಾ
ವ್ರತಹೀನನನರಿದು ಬೆರೆದಡೆ
ಕಾದ ಕತ್ತಿಯಲ್ಲಿ ಕೈ ಕಿವಿ ಮೂಗ ಕೊಯ್ವರಯ್ಯಾ
ಒಲ್ಲೆನೊಲ್ಲೆ ಬಲ್ಲೆನಾಗಿ, ನಿಮ್ಮಾಣೆ ನಿರ್ಲಜ್ಜೇಶ್ವರಾ." [೩]

ಅಂದಿನ ಸಮಾಜದ ಒಬ್ಬ ತೀರ ಅಲಕ್ಷಿತ ಮಹಿಳೆ ಶರಣ ಧರ್ಮದ ತತ್ವಗಳಿಂದ ತುಂಬಾ ಪ್ರಭಾವಿತಳಾಗಿ ಪ್ರತಿಕ್ರಿಯಿಸಿದ ರೀತಿಗೆ ಈ ಒಂದೇ ಒಂದು ವಚನ ಸಾಕೆನಿಸುತ್ತದೆ. ಸೂಳೆಯ ಬದುಕು ತಾರುಣ್ಯವನ್ನೇ ಅವಲಂಬಿಸಿದಂಥದು. ಅದು ಬಾಡುವುದರೊಳಗಾಗಿ ಸಾಧ್ಯವಿದ್ದಷ್ಟು ಗಳಿಸಿಕೊಳ್ಳುವ ಹಂಬಲ ಈ ವೃತ್ತಿಯವರಿಗೆ ಅನಿವಾರ್ಯ. ಅಂಥದನ್ನು ಎಲ್ಲ ಸೂಳೆಯರು ಅನುಸರಿಸುತ್ತಿದ್ದರೂ ಸಂಕವ್ವೆ ವೃತ್ತಿಗೆ ಹೊರತಾಗಿ ಅದಕ್ಕೆ ಕಾಯಕದ ಸ್ವರೂಪ ನೀಡುತ್ತಾಳೆ. ಸೂಳೆತನದ ಘನತೆಯನ್ನು ಹೆಚ್ಚಿಸುತ್ತಾಳೆ. ಹಾಗಾಗಿ ಒತ್ತೆಯ ಹಣ ಸ್ವೀಕರಿಸಿದ ನಿಷ್ಠೆ ಆಕೆಯದು! ಇದು ಸಂಕವ್ವೆಯ ವ್ರತಸ್ಥ ಬದುಕಿನ ಒಂದು ಮಗ್ಗುಲು. ಅದರ ಇನ್ನೊಂದು ಮಗ್ಗುಲು ಇದೇ ವಚನದ ಕೊನೆಯ ಮೂರು ಸಾಲುಗಳಲ್ಲಿ ಬಿಂಬಿತವಾಗಿರುವುದನ್ನು ಕಾಣಬಹುದು. ಅಂದರೆ ಆಕೆ ಕೂಡ ಬಯಸುವ ವಿಟನು ಕೂಡ ಸಾಮಾನ್ಯನಲ್ಲ, ಭವಿಯಲ್ಲ. ಆತನು ಕೂಡ ವ್ರತಸ್ಥನಾಗಿರಬೇಕು. ವ್ರತಹೀನನಲ್ಲಿ ತಪ್ಪಿಕೂಡ ಬೆರೆಯಲಾಗದು! ಅದು ಮಹಾ ಅಪರಾಧ. ಅದಕ್ಕೆ ಕಿವಿ, ಮೂಗು, ಕೈ ಕೊಯ್ಸಿಕೊಳ್ಳುವ ಘೋರ ಶಿಕ್ಷೆಯನ್ನೂ ಅನುಭವಿಸಬೇಕಾಗುತ್ತದೆ. ಹೀಗೆಂದೇ 'ಒಲ್ಲೆನೊಲ್ಲೆ ಬಲ್ಲೆನಾಗಿ ನಿಮ್ಮಾಣೆ ನಿರ್ಲಜ್ಜೇಶ್ವರಾ' ಎಂದು ಆಣೆಗೈದು ಅಂತೆಯೇ ಬದುಕುವ ಸಂಕವ್ವೆ ಗಮನಾರ್ಹಳಾಗುತ್ತಾಳೆ. ದೊಡ್ಡವಳಾಗಿ ಕಾಣಿಸುತ್ತಾಳೆ.

ಒಟ್ಟಾರೆ ನಿಷ್ಠೆ, ಸ್ವಾಭಿಮಾನಗಳನ್ನೇ ನಂಬಿ, ಸಮಾಜವು ಕೀಳು ಎಂಬುದಾಗಿ ಕಾಣುವ ವೃತ್ತಿಯನ್ನು, ನೈತಿಕತೆಯತ್ತ ಕೊಂಡೊಯ್ಯುತ್ತಾಳೆ. ಹೀಗೆ ತಲೆಯೆತ್ತಿ ಬದುಕಿದ ಸೂಳೆ ಸಂಕವ್ವೆ ಧೈರ್ಯ-ಸ್ಥೈರ್ಯಗಳ ಪ್ರತೀಕವಾಗುತ್ತಾಳೆ. ಕಾಯಕವೇ ತಾನಾಗಿ ಬದುಕುತ್ತಾಳೆ.

## ಕೊನೆ ಟಿಪ್ಪಣಿ

೧. ಬಿಸಿಲುಂಡ ಅರಿಸಿನ. ಡಾ.ಸ್ನೇಹಾ ಭೂಸನೂರ. ಪ್ರಕಾಶಕರು ಬಿ.ವ್ಹಿ. ವ್ಹಿ. ಎಸ್. ವೈರಾಗ್ಯದ ಮಲ್ಲಣಾರ್ಯ ಪ್ರಕಾಶನ. ಬಾಗಲಕೋಟೆ. ೨೦೦೬. ಪುಟ. ೧೦೫

೨. ಬಿಸಿಲುಂಡ ಅರಿಸಿನ. ಡಾ.ಸ್ನೇಹಾ ಭೂಸನೂರ. ಪ್ರಕಾಶಕರು ಬಿ.ವ್ಹಿ.ವ್ಹಿ.ಎಸ್. ವೈರಾಗ್ಯದ ಮಲ್ಲಣಾರ್ಯ ಪ್ರಕಾಶನ. ಬಾಗಲಕೋಟೆ. ೨೦೦೬. ಪುಟ .೧೦೬.

೩. ಸಮಗ್ರ ವಚನ ಸಂಪುಟ – ೫. ಶಿವಶರಣೆಯರ ವಚನ ಸಂಪುಟ ಸಂಪಾದಕ ಡಾ. ವೀರಣ್ಣ ರಾಜೂರ, ಕರ್ನಾಟಕ ಸರ್ಕಾರ, ಕನ್ನಡ ಪುಸ್ತಕ ಪಾಧಿಕಾರ. ಬೆಂಗಳೂರು –೨೦೦೧ ಪುಟ. ೩೭೪.

# ಅಧ್ಯಾಯ ೪

## ಸಮಾರೋಪ

ಕನ್ನಡ ಸಾಹಿತ್ಯದಲ್ಲಿ ಚಾರಿತ್ರಿಕವಾದ 'ಮನ್ವಂತರ' ಕಾಲವೆಂದರೆ ಹನ್ನೆರಡನೆಯ ಶತಮಾನದ ವಚನ ಸಾಹಿತ್ಯ. ಈ ಅಧ್ಯಯನದ ಫಲವಾಗಿ ಕನ್ನಡದಲ್ಲಿ ಟೀಕು, ವ್ಯಾಖ್ಯಾನಗಳು, ಸಂಕಲನಗಳು ಹುಟ್ಟಿಕೊಂಡವು. ಶರಣರನ್ನ ಕುರಿತು ಕಥನಗಳು, ಪುರಾಣ, ಕಥಾಕೋಶಗಳು ಹುಟ್ಟಿಕೊಂಡವು. ವಚನ ಕಾಲಘಟ್ಟದಿಂದ ಮಾರ್ಗ ಸಂಪ್ರದಾಯಸ್ಥವಾಗಿದ್ದ ಅಭಿವ್ಯಕ್ತಿತನವನ್ನು ಕ್ರಾಂತಿಯುತವಾದ ಬದಲಾವಣೆಗಳೊಂದಿಗೆ ಕಂಡುಕೊಂಡಿದ್ದವು. ಶತಮಾನಗಳಿಂದಲೂ ಬೇರೂರಿದ್ದ ವರ್ಣ ವ್ಯವಸ್ಥೆಯನ್ನು ಧಿಕ್ಕರಿಸಿದ್ದ ಶರಣರು ನವ ಸಮಾಜದ ನಿರ್ಮಾಣಕ್ಕೆ ಕೈ ಹಾಕಿದರು. ಹೆಣ್ಣನ್ನು ಕೇವಲ ಭೋಗದ ವಸ್ತುವಾಗಿಸಿಕೊಂಡು, ಅಸಮಾನತೆಯ ಅಂದರದಲ್ಲಿದ್ದ ಸಮಾಜವನ್ನು ಎಚ್ಚರಿಸುವಲ್ಲಿ ಸ್ತ್ರೀ ಸಮಾನತೆಯನ್ನು ಸಾಧಿಸಿ ಮಹಿಳೆಯರಿಗೆ ವಚನ ರೂಪಿಸಲು ಅನುವು ಮಾಡಿದ ಮೊಟ್ಟಮೊದಲ ಸಾಹಿತ್ಯವೆಂದರೆ ಅದುವೆ ವಚನ ಸಾಹಿತ್ಯ.

ಜಮೀನ್ದಾರಿ ಪದ್ಧತಿಯಲ್ಲಿ ಹೆಣ್ಣು ಕೇವಲ ಭೋಗಕ್ಕೆ ಮೀಸಲಾಗಿದ್ದನ್ನು ಭೇದಿಸುವ ನಿಟ್ಟಿನಲ್ಲಿ ಅವರನ್ನು ಸಮಾನರಾಗಿ ಕಂಡುಕೊಂಡರು. ಹೆಣ್ಣು ಬಲ, ಛಲ, ಧೈರ್ಯ ಎಲ್ಲವುಗಳನ್ನು ಸಾಂಕೇತಿಕರಿಸುವ ನಿಟ್ಟಿನಲ್ಲಿ ವಚನ ರೂಪಿಸಿದರು. ಆದ್ಯ ವಚನಕಾರನಾದ ಶರಣ(ದೇವರ) ಜೇಡರ ದಾಸಿಮಯ್ಯನು ಲಿಂಗಭೇದವನ್ನು ತೊಡೆಯುವ ನಿಟ್ಟಿನ ವಚನದ ಈ ಸಾಲು ಮಹತ್ವ ಪಡೆಯುತ್ತದೆ.

"ಮೊಲೆ ಮುಡಿ ಬಂದಡೆ ಹೆಣ್ಣೆಂಬರು
ಮೀಸೆ ಕಾಸೆ ಬಂದಡೆ ಗಂಡೆಂಬರು
ನಡುವೆ ಸುಳಿವ ಆತ್ಮನು
ಹೆಣ್ಣು ಅಲ್ಲ, ಗಂಡೂ ಅಲ್ಲ ಕಾಣಾ ರಾಮನಾಥ." ೧

ಎಂಬುದು ಮೂಲ ಪ್ರೇರಣಾ ಶಕ್ತಿಯಾಗಿ ನಿಲ್ಲುತ್ತದೆ. ನಂತರ ಬಸವಣ್ಣ ಮುಂತಾದ ವಚನಕಾರರು ತಮ್ಮ ಲಿಂಗಭೇದ ನೀತಿಯನ್ನು ಸಾರುವ ವಚನಗಳನ್ನು ದಾಖಲಿಸಿದರು. ವೈದಿಕ ನೆಲೆಯ ಲಿಂಗ ತಾರತಮ್ಯತೆಯನ್ನು ವಚನಕಾರರು ಗಂಭೀರವಾಗಿ ಪರಿಗಣಿಸಿದ್ದರಿಂದಲೇ ಹಲವಾರು ಪ್ರಶ್ನೆಗಳನ್ನು ಹಾಕಿದ್ದಾರೆ. ವಚನಕಾರರ ವಿಚಾರಗಳು ಸ್ತ್ರೀವಾದಿ ಸೈದ್ಧಾಂತಿಕ ನೆಲೆಯಲ್ಲಿ ಅಧ್ಯಯನಕ್ಕೆ ದಾರಿ ಮಾಡಿಕೊಟ್ಟಿವೆ.

ಸ್ತ್ರೀವಾದಿ ಚಳುವಳಿ ಎನ್ನುವುದು ಕೇವಲ ಹೆಣ್ಣಿನ ಬಿಡುಗಡೆಯನ್ನಷ್ಟೆ ಬಯಸುವುದಿಲ್ಲ. ಹೆಣ್ಣಿನ ಹಾಗೆಯೇ ಶೋಷಣೆಗೆ ಒಳಪಡುವ ಗುಲಾಮಿ ವರ್ಗದವರ ಗಂಡಸಿನ

ಬಿಡುಗಡೆಯೊಂದಿಗೆ ತನ್ನ ಬಂಧನವನ್ನು ಬಿಡಿಸಿಕೊಳ್ಳಲು ಯತ್ನಿಸುತ್ತದೆ. ಕೌಟುಂಬಿಕ ಬದುಕಿನ ವ್ಯಾಪ್ತಿಯಲ್ಲಿ ಹೆಣ್ಣಿನ ಚಿತ್ರ ತಾಯಿ, ಅಕ್ಕ-ತಂಗಿ, ಮಗಳು, ಇವರೆಲ್ಲ ಪಾತಿವ್ರತ್ಯದ ಶೀಲದ ಅನುಸಂಧಾನ ಪಾತ್ರಗಳಾಗಿದ್ದರೆ, ಇನ್ನೊಂದೆಡೆ ವಿದ್ರೋಹಿ ವ್ಯಕ್ತಿತ್ವವನ್ನು ಸಾಮಾಜಿಕವಾಗಿ ನೀಚಳು, ಗಣಿಕೆ, ಜಾರಿಣಿ, ಸೂಳೆ, ವಂಚಕಿ, ಚಂಚಲೆ ಎಂಬುದಾಗಿ ಕಂಡುಕೊಂಡಿದ್ದಾರೆ. ಈ ಹಿನ್ನಲೆಯಲ್ಲಿ ವಚನ ಸಾಹಿತ್ಯದ ಆಶಯಗಳು, ಸಾಧನೆಗಳು, ಸ್ತ್ರೀ ಸಮಾನತೆಯ ಅಂಶಗಳಲ್ಲಿ ಬಂದೇ ಬರುತ್ತದೆ. ಆ ಸಂದರ್ಭದಲ್ಲಿ ಬಸವಣ್ಣನ ನೇತೃತ್ವದ ವಚನ ಚಳುವಳಿಯು ಸಮುದಾಯದ ಒಂದು ಭಾಗವಾಗಿ ಕಾಣುವ ಸ್ತ್ರೀಪರವಾದ ಚಿಂತನೆಯ ನೆಲೆಯಲ್ಲಿ ಅಕ್ಕಮಹಾದೇವಿ, ಮುಕ್ತಾಯಕ್ಕ, ಆಯ್ದಕ್ಕಿ ಲಕ್ಕಮ್ಮ, ಗಂಗಾಂಜಿಕೆ, ನೀಲಾಂಜಿಕೆಯರಿಂದ ಹಿಡಿದು ಸೂಳೆ ಸಂಕವ್ವೆಯವರೆಗಿನ ವಚನಕಾರ್ತಿಯರು ಸ್ತ್ರೀ ಸಮುದಾಯದ ಪ್ರತಿನಿಧಿಯಾಗಿ ನಿಂತು ಸಾಹಿತ್ಯ ರೂಪಿಸಿದ್ದಾರೆ.

ಶಿವಶರಣೆಯರು ಕೇವಲ ಕೌಟುಂಬಿಕ ನೆಲೆಯಲ್ಲಿ ಮಾತ್ರವಲ್ಲದೆ, ಸಾಹಿತ್ಯಿಕ ಕ್ಷೇತ್ರದಲ್ಲಿಯೂ ತಮ್ಮನ್ನು ಗುರುತಿಸಿಕೊಂಡಿದ್ದಾರೆ. ಶರಣರು ಇತ್ತ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಸಂಪೂರ್ಣವಾಗಿ ಸದುಪಯೋಗಪಡಿಸಿಕೊಂಡು ರಚಿಸಿದ ಇವರ ವಚನಗಳು ಅನೇಕ ದೃಷ್ಟಿಯಿಂದ ಗಮನಾರ್ಹವೆನಿಸಿವೆ.

ಧಾರ್ಮಿಕ ವಿಚಾರಗಳಿಗಿಂತ ಶರಣೆಯರ ವಚನಗಳಲ್ಲಿ ಸಾಮಾಜಿಕ ಸಂಗತಿಗಳು ಹೆಚ್ಚು ಪ್ರಮಾಣದಲ್ಲಿ ಪ್ರಕಟವಾಗಿವೆ. ಸಮಾಜ ಸುಧಾರಣೆಯನ್ನೇ ಮುಖ್ಯಗುರಿಯಾಗಿಟ್ಟು ಕೊಂಡು ನಡೆದ ಶರಣರ ಸಂಗಾತಿಗಳಾದ ಇವರು ಆ ಕಡೆಗೆ ಹೆಚ್ಚು ಗಮನಹರಿಸಿದ್ದು ಸಹಜವೇ ಆಗಿದೆ. ಸಮಾಜದಲ್ಲಿ ಮೊದಲಿನಿಂದಲೂ ಬೇರೂರಿ ಬೆಳೆದು ಬಂದಿದ್ದ ಮೇಲು ಕೀಳು, ಸ್ಪೃಶ್ಯ-ಅಸ್ಪೃಶ್ಯ, ಗಂಡು-ಹೆಣ್ಣು ಎಂಬ ಭೇದ ಮತ್ತು ಅನೈತಿಕ ನಡವಳಿಕೆಯನ್ನು ಇವರು ಮುಖ್ಯವಾಗಿ ವಿಮರ್ಶೆಗೆ ಒಳಪಡಿಸಿದ್ದಾರೆ. ಜೊತೆಗೆ ಸತ್ಯ ಶುದ್ಧ ಕಾಯಕ, ದಾಸೋಹಗಳ ಮೂಲಕ ಆರ್ಥಿಕ ಸಮಾನತೆಯನ್ನು ಕಾಯ್ದುಕೊಳ್ಳಲು, ನೀತಿಯುತ ಬದುಕು ನಡೆಸಿ ವೈಯುಕ್ತಿಕ ಹಾಗೂ ಸಾಮಾಜಿಕ ಸ್ವಾಸ್ಥ್ಯ ಕಾಪಾಡಿಕೊಳ್ಳಲು ಭೋದಿಸಿ, ತಾವೂ ಅದರಂತೆ ಆಚರಿಸಿ, ಶರಣರ ನವಸಮಾಜ ನಿರ್ಮಾಣ ಮಣಿಹದಲ್ಲಿ ಮನಃ ಪೂರ್ವಕವಾಗಿ ಪಾಲ್ಗೊಂಡಿದ್ದಾರೆ.

ಸಾಹಿತ್ಯಿಕವಾಗಿ ಶರಣೆಯರ ವಚನಗಳು, ಶರಣರ ವಚನಗಳ ಶಿಲ್ಪ, ಅಲಂಕಾರ, ಭಾಷೆ, ಶೈಲಿ, ಭಕ್ತಿ ಮತ್ತು ಕಾಯಕ ನಿಷ್ಠೆ ಮೂಡಿಬಂದಿದೆ. ಶರಣೆಯರ ವಚನಗಳೆಲ್ಲ ಮುಕ್ತಕ ರೂಪದ ಸಂಕ್ಷಿಪ್ತ ರಚನೆಗಳಾಗಿದ್ದು, ಹೆಚ್ಚಿನವು ಆಯಾ ಶರಣೆಯರ ವೃತ್ತಿ ಪರಿಭಾಷೆಯನ್ನು ಸಮರ್ಪಕವಾಗಿ ಬಳಸಿಕೊಂಡು ಪ್ರಾಮಾಣಿಕ ಅಭಿವ್ಯಕ್ತಿಗಳೆನಿಸಿವೆ. ಸಾಮಾನ್ಯವಾಗಿ ಈ ವಚನಗಳನ್ನು ರಚಿಸಿದವರು ಕೆಳಸ್ತರದಿಂದ ಬಂದವರು. ಹೀಗಾಗಿ ಇವರಲ್ಲಿ ಸಾಮಾಜಿಕ ಪ್ರಜ್ಞೆ, ಮಾತಿನಲ್ಲಿ ಒರಟುತನ, ಗಡಸುಗಾರಿಕೆಯಿಂದ ಕೂಡಿದ ದೇಶೀಯ ಸೊಗಡು, ಶೋಷಣೆಯ ವಿರುದ್ಧದ ರೊಚ್ಚು, ಹಾಗೂ ಭಕ್ತಿ ಮತ್ತು ಕಾಯಕ ನಿಷ್ಠೆಗಳು ಕಂಡುಬರುತ್ತವೆ.

ಒಟ್ಟಾರೆಯಾಗಿ ಹೇಳುವುದಾದರೆ ಆಯ್ದಕ್ಕಿ ಲಕ್ಕಮ್ಮನ ಕಾಯಕ ನಿಷ್ಠೆ, ಮುಕ್ತಾಯಕ್ಕನ ಬೌದ್ಧಿಕ ಪ್ರಖರತೆ, ಗಂಗಾಂಬಿಕೆಯ ಭಕ್ತಿ, ದಾಸೋಹ ನಿಷ್ಠೆ, ನೀಲಾಂಬಿಕೆಯ ಪತಿಭಕ್ತಿ ಹಾಗೂ ಸೂಳೆಸಂಕವ್ವೆ ಪ್ರತಸ್ಥ ಬದುಕಿನ ನಿಲುವು ಮುಖ್ಯ ಮೌಲ್ಯಗಳೆನಿಸಿವೆ.

ಹೀಗೆ ಶರಣರು ಒದಗಿಸಿದ ಸ್ವಾತಂತ್ರ್ಯವನ್ನು ಮುಕ್ತವಾಗಿ ಸ್ವೀಕರಿಸಿ, ಅವರ ಸಮಾಜೋ-ಧಾರ್ಮಿಕ ಆಂದೋಲನದಲ್ಲಿ ಕ್ರಿಯಾತ್ಮಕವಾಗಿ ಪಾಲ್ಗೊಂಡು, ಅಪೂರ್ವವಾದ ಸಾಹಿತ್ಯ ಸೃಷ್ಟಿಸಿ, ಜಾಗತಿಕ ಇತಿಹಾಸದಲ್ಲಿ ವಿಸ್ಮಯಕರ ಘಟನೆಯನ್ನು ದಾಖಲುಗೊಳಿಸಿದ ಶಿವಶರಣೆಯರು ಕರ್ನಾಟಕದ, ಕನ್ನಡದ ಹೆಮ್ಮೆ ಎನಿಸಿದ್ದಾರೆ.

---

ಕೊನೆ ಟಿಪ್ಪಣಿ : ೧. ಸಮಗ್ರ ವಚನ ಸಂಪುಟ ೫. ವ.೬೯೬.

## ಪರಾಮರ್ಶನ ಗ್ರಂಥಗಳು


೧. ವಚನ: ವ್ಯಕ್ತಿತ್ವ ವಿಕಾಸ. ಡಾ. ಹಾ. ಮ. ನಾಗಾರ್ಜುನ. ದೇಸಿ ಪುಸ್ತಕ. ವಿಜಯನಗರ. ಬೆಂಗಳೂರು. ೨೦೧೧

೨. ಸಮಗ್ರ ವಚನ ಸಂಪುಟ – ೫. ಶಿವಶರಣೆಯರ ವಚನ ಸಂಪುಟ ಸಂಪಾದಕ ಡಾ. ವೀರಣ್ಣ ರಾಜೂರ, ಕರ್ನಾಟಕ ಸರ್ಕಾರ, ಕನ್ನಡ ಪುಸ್ತಕ ಪ್ರಾಧಿಕಾರ. ಬೆಂಗಳೂರು –೨೦೦೧

೩. ಐವರು ಶಿವಶರಣೆಯರು, ಸಂಪಾದಕ ಡಾ. ಆರ್. ಶಿವಣ್ಣ. ಲೇಖಕರು ನೀಲಾವರ ಸುರೇಂದ್ರ ಅಡಿಗ, ಬಸವತತ್ವ ಪ್ರಚಾರ ಹಾಗೂ ಸಂಶೋದನಾ ಕೇಂದ್ರ ಪ್ರಕಾಶನ. ಬೆಂಗಳೂರು – ೨೦೧೧.

೪. ಆಯ್ದಕ್ಕಿ ಮಾರಯ್ಯ. ಸಂಪಾದಕರು: ಡಾ. ಬಿ. ಎಸ್. ಸ್ವಾಮಿ. ಲೇಖಕರು : ಪ್ರೇಮಾಭಟ್. ಬಸವತತ್ವ ಪ್ರಚಾರ ಹಾಗೂ ಸಂಶೋಧನಾ ಕೇಂದ್ರ ಪ್ರಕಾಶನ. ಬೆಂಗಳೂರು – ೨೦೦೬.

೫. ಮುಕ್ತಾಯಕ್ಕನ ವಚನಗಳು. ಸಂಪಾದಕ: ಪ್ರೊ. ಎಸ್. ಎಸ್. ಭೂಸರೆಡ್ಡಿ. ಡಾ॥ ಮಧು ವೆಂಕಾರೆಡ್ಡಿ. ಪ್ರಕಾಶಕರು; ಬಸವ ಸಮಿತಿ, ಬಸವೇಶ್ವರ ವೃತ್ತ, ಬೆಂಗಳೂರು –೧೯೯೩.

೬. ಅಲ್ಲಮಪ್ರಭು ಮುಕ್ತಾಯಕ್ಕ ಮಹಾದೇವಿಯಕ್ಕಗಳ ವಚನಗಳಲ್ಲಿ ಸೈದ್ಧಾಂತಿಕ ಚರ್ಚೆ. – ಡಾ. ಬಸವರಾಜ ಸಬರದ. ಬಸವಪಥ – ೧೯೯೧

೭. ಬಸವಯುಗದ ಶಿವಶರಣೆಯರು. ಸೌ. ಲಲ್ಲೇಶ್ವರಿ ಶಂ. ಮುಗಿ. ಐ.ಬಿ.ಹೆಚ್ ಪ್ರಕಾಶನ. ಗಾಂಧಿನಗರ. ಬೆಂಗಳೂರು – ೧೯೮೧

೮. ಅರಿವು–ಆಚಾರ. ಬಿ.ಮಹಾದೇವಪ್ಪ. ಪ್ರಕಾಶಕರು ಅರಿವು–ಆಚಾರ ಪ್ರಕಟನಾಲಯ ಯಾದಗಿರಿ. ೧೯೯೯.

೯. ವಚನ ಸಾಹಿತ್ಯ ಮಾಲಿಕೆ – ೮೨. ಗಂಗಾಂಬಿಕೆ – ನೀಲಾಂಬಿಕೆ. ಡಾ. ಕೆ.ಎಸ್. ರತ್ನಮ್ಮ. ಪ್ರಕಾಶಕರು ಅಖಿಲ ಕರ್ನಾಟಕ ವಚನ ಸಾಹಿತ್ಯ ಪರಿಷತ್ತು. ಮೈಸೂರು.೨೦೦೯.

೧೦. ವಚನ ಸುಮ ಸೌರಭ. ಮಾತೆ ವಾಗ್ದೇವಿ. ಬಸವತತ್ವ ಅನುಭಾವ ಕೇಂದ್ರ ಬೆಳಗಾವಿ. ಪ್ರಕಾಶಕರು ಲಿಂಗಾಯಿತ ಸಂಶೋಧನಾಕೇಂದ್ರ. ಬೆಳಗಾವಿ – ೨೦೧೨

೧೧. ಮಹಾಶರಣೆ ನೀಲಾಂಬಿಕೆ. ಪ್ರೊ.ಎಸ್.ಎಸ್. ಭೂಸರೆಡ್ಡಿ. ಪ್ರಕಾಶಕರು ಸಾಹಿತ್ಯಸಮಿತಿ, ಲಿಂಗಾಯಿತ ವಿದ್ಯಾಭಿವೃದ್ಧಿ ಸಂಸ್ಥೆ, ಧಾರವಾಡ – ೧೯೮೨.

೧೨. ನೀಲಮ್ಮನ ವಚನಗಳು. ಸಂಪಾದಕ ಡಾ.ಸಾ.ಶಿ. ಮರುಳಯ್ಯ. ಎಸ್.ಶಿವಣ್ಣ. ಬಸವ ಸಮಿತಿ. ಬಸವೇಶ್ವರ ವೃತ್ತ ಬೆಂಗಳೂರು. ೧೯೯೩.

೧೩. ಬಿಸಿಲುಂಡ ಅರಿಸಿನ. ಡಾ.ಸ್ನೇಹಾ ಭೂಸನೂರ.
ಪ್ರಕಾಶಕರು ಬಿ.ವ್ಹಿ. ವ್ಹಿ. ಎಸ್. ವೈರಾಗ್ಯದ ಮಲ್ಲಣಾರ್ಯ ಪ್ರಕಾಶನ.
ಬಾಗಲಕೋಟೆ. ೨೦೦೬.

೧೪. ವಚನ ಸ್ವರೂಪ ಒಂದು ವಿವೇಚನೆ . ಡಾ. ಪಿ.ವಿ. ನಾರಾಯಣ. ಪ್ರಕಾಶಕರು ವಸಂತ ಎಂಟರ್‌ಪ್ರೈಸಸ್. ಚಾಮರಾಜಪೇಟೆ. ಬೆಂಗಳೂರು. ೨೦೧೧.

೧೫. ಶರಣರ ಪರಿಸರ ಪ್ರಜ್ಞೆ, ಡಾ.ಎಸ್. ಎಂ. ಮರುಳಸಿದ್ಧಯ್ಯ. ಪ್ರಕಾಶಕರು ಬಸವತತ್ವ ಪ್ರಚಾರ ಹಾಗೂ ಸಂಶೋಧನಾ ಕೇಂದ್ರ ಪ್ರಕಾಶನ.
ಬೆಂಗಳೂರು – ೨೦೧೧.

೧೬. ಗಂಗಾಂಬಿಕೆ ನೀಲಾಂಬಿಕೆ – ಲೇಖಕರು ಶ್ರೀಮತಿ ಶಾಂತಲಾ ಯೋಗೀಶ ಯಡ್ರಾವಿ. ಪ್ರಕಾಶಕರು ಬಸವತತ್ವ ಪ್ರಚಾರ ಹಾಗೂ ಸಂಶೋಧನ ಕೇಂದ್ರ ಪ್ರಕಾಶನ. ಬೆಂಗಳೂರು – ೨೦೧೨.

೧೭. ಅಜಗಣ್ಣ – ಮುಕ್ತಾಯಕ್ಕ ಡಾ. ಎಸ್. ವಿದ್ಯಾಶಂಕರ. ಸಂಪಾದಕರು. ಡಾ. ಬಿ. ಎಸ್. ಸ್ವಾಮಿ. ಪ್ರಕಾಶಕರು ಬಸವತತ್ವ ಪ್ರಚಾರ ಹಾಗೂ ಸಂಶೋಧನಾ ಕೇಂದ್ರ ಪ್ರಕಾಶನ. ಬೆಂಗಳುರು. ೨೦೦೭.

೧೮. ಶರಣ ಪರಂಪರೆ ಪುಸ್ತಕ ಮಾಲೆ–೧೦. ಮಹಾಜ್ಞಾನಿ ಮುಕ್ತಾಯಕ್ಕ. ಡಾ.ಶೈಲಜಾ ಉಡಚಣ. ಪ್ರಕಾಶಕರು. ಬಸವ ಸಮಿತಿ. ಬಸವ ಭವನ. ಬಸವೇಶ್ವರ ರಸ್ತೆ. ಬೆಂಗಳೂರು. ೨೦೦೮

೧೯. ವಚನಸಾರ –ಸಂಪಾದಕರು. ಡಾ. ವೀರಣ್ಣ ರಾಜೂರ. ಪ್ರಕಾಶಕರು. ವೀರಶೈವ ಅಧ್ಯಯನ ಸಂಸ್ಥೆ. ಜಗದ್ಗುರು ತೋಂಟದಾರ್ಯಮಠ, ಗದಗ. – ೧೯೮೯

